೨೧೦

# ಭಾರತದ ಆರ್ಥಿಕ ಬಿಕ್ಕಟ್ಟು

ಸಿ. ಕೆ. ರೇಣುಕಾರ್ಯ



ಪ್ರಚಾರ ಪುಸ್ತಕಮಾಲೆ-೨೧೦

# ಭಾರತದ ಆರ್ಥಿಕ ಬಿಕ್ಕಟ್ಟು

(ರಾಷ್ಟ್ರದ ಪ್ರಮುಖ ಅರ್ಥಶಾಸ್ತ್ರ ತಜ್ಞರು ಭಾರತದ ಪ್ರಧಾನಿಯವರಿಗೆ ಸಲ್ಲಿಸಿದ ಮನವಿ)

ಸಿ. ಕೆ. ರೇಣುಕಾರ್ಯ






ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೪

ಮೊದಲನೆಯ ಮುದ್ರಣ—೧೯೭೪
೫,೦೦೦ ಪ್ರತಿಗಳು



ಬೆಲೆ : ೨೫ ಪೈಸೆ

ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ
ಮಾನಸಗಂಗೋತ್ರಿ, ಮೈಸೂರು-೫೭೦೦೦೬

ಮುದ್ರಕರು
ಪೃಥ್ವೀ ಉದ್ಯಮಕೇಂದ್ರ
ಸರಸ್ವತೀಪುರಂ, ಮೈಸೂರು-೯

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ, ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ ಕಾನ್ವೊಕೇಷನ್, ಸಮಾರಂಭದ ಕಾಲದಲ್ಲಿಯೂ, ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ

ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು ಕೊಂಡು ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನು ಉಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶ ವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗ ಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರ ವನ್ನು ಪರಿಹರಿಸಲು ನೆರವಾಗುತ್ತವೆ. ಜನರಲ್ಲಿ ಜ್ಞಾನೋದಯ ವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆ ಯನ್ನು ಹೋಗಲಾಡಿಸಿ ವಿಶಾಲಭಾವನೆ ಮೂಡುವಂತೆ ಮಾಡು ತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಿಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು

ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತ ವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತ ಇನ್ನೂರ ಒಂಬತ್ತು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಶ್ರೀ ಸಿ. ಕೆ. ರೇಣುಕಾರ್ಯ ಅವರ 'ಭಾರತದ ಆರ್ಥಿಕ ಬಿಕ್ಕಟ್ಟು' ಇದೀಗತಾನೆ ಈ ಮಾಲೆಯಲ್ಲಿ ಹೊರಬರುತ್ತಿದೆ. ಇದು ಹೆಚ್ಚು ಜನಪ್ರಿಯವಾಗಲೆಂದು ಆಶಿಸುತ್ತೇನೆ.

ದೇ. ಜವರೇಗೌಡ

ಮೈಸೂರು

ಕುಲಪತಿ

# ಅರಿಕೆ

ಭಾರತದ ಆರ್ಥಿಕ ಬಿಕ್ಕಟ್ಟು ಒಂದು ಗಂಭೀರ ಸ್ವರೂಪವನ್ನು ಪಡೆದುಕೊಂಡಿದೆ. ಮಿತಿಮೀರಿರುವ ಹಣದುಬ್ಬರ, ಜನ ಸಾಮಾನ್ಯರ ಜೀವನಮಟ್ಟವನ್ನು ಅಲ್ಲೋಲ-ಕಲ್ಲೋಲ ಮಾಡಿದೆ. ಹಣದುಬ್ಬರವನ್ನು ಹತ್ತಿಕ್ಕದೆ, ಆರ್ಥಿಕ ಬಿಕ್ಕಟ್ಟನ್ನು ಬಿಡಿಸುವುದು ಸಾಧ್ಯವೇ ಇಲ್ಲ. ಈ ಪ್ರಶ್ನೆಗೆ ಉತ್ತರವನ್ನು ದೊರಕಿಸಿಕೊಡಲು ರಾಷ್ಟ್ರದ ಪ್ರಮುಖ ಆರ್ಥಿಕಚಿಂತಕರು ಶ್ರದ್ಧೆಯಿಂದ ಪ್ರಯತ್ನಿಸಿದ್ದಾರೆ. ರಾಷ್ಟ್ರದ 100ಕ್ಕೂ ಹೆಚ್ಚಿನ ಅರ್ಥವಿಜ್ಞಾನಿಗಳು ಆರ್ಥಿಕ ಬಿಕ್ಕಟ್ಟನ್ನು ಬಗೆಹರಿಸಲು ಅಗತ್ಯವಾದ ಕ್ರಮಗಳ ಬಗ್ಗೆ ತೀವ್ರವಾಗಿ ಚಿಂತಿಸಿ, ಆ ಕ್ರಮಗಳನ್ನು ಒಂದು ಮೆಮೊರಾಂಡಂನ ರೂಪದಲ್ಲಿ ಪ್ರಧಾನ ಮಂತ್ರಿಯವರಿಗೆ ಸಲ್ಲಿಸಿದ್ದಾರೆ. ಯಾವ ಸ್ವಾರ್ಥವೂ ಇಲ್ಲದ ಅರ್ಥವಿಜ್ಞಾನಿಗಳ ಶಿಫಾರ್ಸುಗಳನ್ನು ಕಾರ್ಯಗತ ಮಾಡಿದಲ್ಲಿ ರಾಷ್ಟ್ರ ತನ್ನ ಆರ್ಥಿಕ ಸಂಕಷ್ಟದಿಂದ ಹೊರಬರುವುದರಲ್ಲಿ ಸಂಶಯವಿಲ್ಲ. ಪ್ರಮುಖ ಅರ್ಥವಿಜ್ಞಾನಿಗಳ ಶಿಫಾರ್ಸುಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವುದೇ ಈ ಕಿರುಹೊತ್ತಿಗೆಯ ಪ್ರಯತ್ನ.

ನಾನು ಈ ಕಿರುಹೊತ್ತಿಗೆಯನ್ನು ಬರೆಯಲು ಮುಖ್ಯವಾಗಿ ಕಾರಣಕರ್ತರೆಂದರೆ ಪ್ರಸಾರಾಂಗದ ನಿರ್ದೇಶಕರಾದ ಡಾ|| ಪ್ರಭುಶಂಕರರು. ಅವರು ನಮ್ಮ ದೈನಂದಿನ ಆರ್ಥಿಕ ವಿಷಯಗಳು ಜನಸಾಮಾನ್ಯರಿಗೆ ತಿಳಿಯದಿದ್ದರೆ, ಸಮಸ್ಯೆಗಳಿಗೆ ಪರಿಹಾರ

ಗಳು ಎಂದಿಗೂ ದೊರೆಯುವುದಿಲ್ಲ ಮತ್ತು ಜನಸಾಮಾನ್ಯರು ಆರ್ಥಿಕ ವಿಷಯಗಳ ಬಗ್ಗೆ ಅಂಧಕಾರ ಮಟ್ಟದಲ್ಲಿದ್ದಷ್ಟೂ ನಮ್ಮಲ್ಲಿ ನಡೆಯುತ್ತಿರುವ ಆರ್ಥಿಕ ಶೋಷಣೆ ಮುಂದುವರಿಯುತ್ತಲೇ ಹೋಗುತ್ತದೆಂಬ ದೃಢನಂಬಿಕೆಯನ್ನಿಟ್ಟುಕೊಂಡಿದ್ದಾರೆ. ಈ ಕಾರಣದಿಂದಲೇ ತರುಣರನ್ನು ಪ್ರೋತ್ಸಾಹಿಸಿ ಪ್ರಚಲಿತ ಆರ್ಥಿಕ ವಿಷಯಗಳ ಬಗ್ಗೆ ಗ್ರಂಥಗಳನ್ನು ಬರೆಸುತ್ತಿದ್ದಾರೆ. ಅವರ ಈ ಪ್ರೋತ್ಸಾಹಕ್ಕಾಗಿ ನಾನು ಅವರಿಗೆ ಚಿರಋಣಿ. ಬೊಂಬಾಯಿ ವಿಶ್ವವಿದ್ಯಾನಿಲಯದಲ್ಲಿ, ಹಣಕಾಸು ಅರ್ಥ ವಿಜ್ಞಾನದ ಪ್ರಾಧ್ಯಾಪಕರಾಗಿರುವ ಡಾ|| ಬ್ರಹ್ಮಾನಂದ ಅವರು ರಾಷ್ಟ್ರದ ಎಲ್ಲ ಪ್ರಮುಖ ಅರ್ಥವಿಜ್ಞಾನಿಗಳನ್ನು ಸಂಧಿಸಿ, ರಾಷ್ಟ್ರದ ಆರ್ಥಿಕ ಬಿಕ್ಕಟ್ಟಿನ ಬಗ್ಗೆ ಚರ್ಚಿಸಿ ಅವರ ಮತಗಳನ್ನು ಕಲೆಹಾಕಿ, ಈ ಮೆಮೊರಾಂಡಂಅನ್ನು ತಯಾರಿಸಿದ್ದಾರೆ. ಬೊಂಬಾಯಿ ವಿಶ್ವವಿದ್ಯಾನಿಲಯದ. ಡಾ|| ಸಿ. ಎನ್. ವಕೀಲ್ ಮತ್ತು ಡಾ|| ಬ್ರಹ್ಮಾನಂದ ಈ ಕೃತಿಯ ನೇತಾರರು. ಡಾ|| ಬ್ರಹ್ಮಾನಂದ ಅವರು ಮೈಸೂರಿಗೆ ಬಂದಿದ್ದಾಗ ಈ ಕೃತಿ ಕನ್ನಡಕ್ಕೆ ಬರಬೇಕೆಂದಾಗ ತಕ್ಷಣವೇ ತಮ್ಮ ಅನುಮತಿ ಯನ್ನಿತ್ತಿದ್ದಾರೆ. ಅವರು ಅನೇಕ ಸಲಹೆಗಳನ್ನು ಸಹ ಈ ಬಗ್ಗೆ ನೀಡಿದ್ದಾರೆ. ನಾನು ಅವರ ಸಹಾಯವನ್ನು ಹೃತ್ಪೂರ್ವಕ ವಾಗಿ ನೆನೆಯುತ್ತೇನೆ. ಸ್ವಲ್ಪ ದಿನಗಳ ಹಿಂದೆ ನಮ್ಮನ್ನಗಲಿದ ಪ್ರಾಧ್ಯಾಪಕ ಡಾ|| ಜಿ. ಟಿ. ಹುಚ್ಚಪ್ಪನವರು ನನ್ನ ಬರವಣಿಗೆ ಗಳನ್ನು ಯಾವಾಗಲೂ ಪ್ರೋತ್ಸಾಹಿಸುತ್ತಾ ಬಂದಿದ್ದರು. ಅವರಿಗೆ ನಾನು ಋಣಿ. ನನಗೆ ಕೆಲವು ಅನುಮಾನಗಳು ಬಂದಾಗ ಅವನ್ನು ಅರ್ಥಶಾಸ್ತ್ರದ ಪ್ರಾಧ್ಯಾಪಕರಾದ ಶ್ರೀ ಎ. ಪಿ.

ಶ್ರೀನಿವಾಸಮೂರ್ತಿಯವರು ಬಗೆಹರಿಸಿದ್ದಾರೆ. ಅವರಿಗೆ ನನ್ನ ವಂದನೆಗಳು. ಇದನ್ನು ಪ್ರಕಾಶಿಸುತ್ತಿರುವ ಪ್ರಸಾರಾಂಗದ ಅಧಿಕಾರ ವರ್ಗದವರಿಗೆ ನನ್ನ ವಂದನೆಗಳು.

ಮೈಸೂರು
೧೧-೭-೭೪

ಸಿ. ಕೆ. ರೇಣುಕಾರ್ಯ

## ಹಿನ್ನೆಲೆ

ಭಾರತ ಇಂದು ತನ್ನ ಇತಿಹಾಸದಲ್ಲೇ ಕಂಡರಿಯದಿದ್ದ ಹಣದುಬ್ಬರ ಪರಿಸ್ಥಿತಿಯೊಂದಕ್ಕೆ ಸಿಕ್ಕಿ ನರಳುತ್ತಿದೆ. ಕೆಲವೊಂದು ಸಣ್ಣ ವರ್ಗದ ಜನರನ್ನು ಬಿಟ್ಟರೆ, ಉಳಿದೆಲ್ಲ ಜನರೂ ಇದರ ತಾಪದಿಂದ ಬೆಂದು ನೋಯುತ್ತಿದ್ದಾರೆ. ಕೇವಲ ಆರ್ಥಿಕ ದುಸ್ಥಿತಿಯನ್ನಷ್ಟನ್ನೇ ಅಲ್ಲದೆ ಹಣದುಬ್ಬರ ಅನೇಕ ಸಾಮಾಜಿಕ ಹಾಗೂ ನೈತಿಕ ಪರಿಣಾಮಗಳನ್ನು ಅರ್ಥವ್ಯವಸ್ಥೆಯ ಮೇಲೆ ಉಂಟುಮಾಡಿ, ತನ್ನ ಕರಾಳ ಸ್ವರೂಪವನ್ನು ಎಲ್ಲ ಕಡೆಯೂ ಬೀರಿದೆ. ಸಾಮಾಜಿಕವಾಗಿ ಲಕ್ಷೋಪಲಕ್ಷ ಜನ ಈ ರಾಷ್ಟ್ರದಲ್ಲಿ ರಾತ್ರಿಯ ಊಟವನ್ನು ಬಿಟ್ಟು ಮಲಗುವಂತೆ ಮಾಡಿದ್ದರೆ, ಮಧ್ಯಮವರ್ಗದ ಜನ ನೀತಿಹೀನರೂ, ಲಂಚಕೋರರೂ, ಭ್ರಷ್ಟಾಚಾರಿಗಳೂ ಆಗುವಂತಾಗಿದೆ. ಇಂತಹ ಒಂದು ಪರಿಸ್ಥಿತಿಗೆ ಏನು ಕಾರಣ? ಇದಕ್ಕೆ ಪರಿಹಾರಗಳೇನು? ಎನ್ನುವ ಪ್ರಶ್ನೆಗೆ ಉತ್ತರವನ್ನು ಯಾರು ನೀಡಬೇಕು ಎನ್ನುವುದು ಇನ್ನೂ ಬಗೆಹರಿದಿಲ್ಲ. ರಾಷ್ಟ್ರವನ್ನಾಳುತ್ತಿರುವ ಜನ, ತಮ್ಮ ನೀತಿಗಳು ಆರ್ಥಿಕ ಬೆಳವಣಿಗೆಗೆ ಪೋಷಕವಾಗಿರುವುದರಿಂದ ಇಂತಹ ಕಷ್ಟನಷ್ಟಗಳನ್ನು ಸ್ವಲ್ಪಕಾಲ ಸಹಿಸಬೇಕಾಗುತ್ತದೆ ಎಂದು ವಾದಿಸುತ್ತಾ, ತಮ್ಮ ಬೃಹದಾಕಾರದ ಯೋಜನೆಗಳು ಫಲಕೊಡುವಂತಾದಾಗ ಅನೇಕ ಸಮಸ್ಯೆಗಳು ತಮಗೆ ತಾವೇ ಬಗೆಹರಿಯುತ್ತವೆಂಬ ನಂಬಿಕೆಯನ್ನು ಇಟ್ಟುಕೊಂಡಿದ್ದಾರೆ. ರಾಷ್ಟ್ರದ ಹಣದುಬ್ಬರ ಮತ್ತು ಇತರ ಆರ್ಥಿಕ ಸಮಸ್ಯೆಗಳಿಗೆ ತಮ್ಮ ಆರ್ಥಿಕ ನೀತಿಗಳು ಅಷ್ಟಾಗಿ ಕಾರಣವಲ್ಲವೆಂದೂ, ಆದರೆ ರಾಷ್ಟ್ರಕ್ಕೆ ಅನಿರೀಕ್ಷಿತ

ವಾಗಿ ಒದಗಿರುವ ಬಾಂಗ್ಲಾ ಸಮಸ್ಯೆ, ಅನೇಕ ಕಡೆಗಳಲ್ಲಿ ಕ್ಷಾಮ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಪೆಟ್ರೋಲಿಯಂ ಪದಾರ್ಥಗಳ ಬೆಲೆಗಳ ಏರಿಕೆ ನೇರವಾಗಿ ಕಾರಣವೆಂದೂ ಜನ ರನ್ನು ಸಮಾಧಾನಗೊಳಿಸುವ ಯತ್ನಗಳನ್ನು ಸಹ ಅವರು ನಡೆಸಿ ದ್ದಾರೆ. ಕಾರಣಗಳೇನೇ ಇರಲಿ, ರಾಷ್ಟ್ರ ಒಂದು ಗಂಭೀರವಾದ ಆರ್ಥಿಕ ಪರಿಸ್ಥಿತಿಯನ್ನೆದುರಿಸುತ್ತಿದೆ, ಮತ್ತು ಹಣದುಬ್ಬರ ತನ್ನ ತುಟ್ಟತುದಿಯ ಅಂಶವನ್ನು ಮುಟ್ಟಿದೆ ಎಂಬ ಅಂಶ ತೀರ ಸತ್ಯವಾದುದು.

ಹಣದ ಉಬ್ಬರದ ಸಮಸ್ಯೆ ಅತ್ಯಂತ ಜಟಿಲವಾದುದು. ಅದನ್ನು ಪ್ರತ್ಯೇಕಿಸಿ, ಅದೊಂದಕ್ಕೇ ಕಾರಣ-ಪರಿಹಾರಗಳನ್ನು ಹುಡುಕುವುದು ತೀರ ಕಷ್ಟ. ಹಣದ ಉಬ್ಬರ ಆರ್ಥಿಕ ಬಿಕ್ಕಟ್ಟಿನ ಸಮಸ್ಯೆಗಳನ್ನು ಉಲ್ಬಣಗೊಳಿಸಿದ್ದರೆ, ಇತರ ಸಮಸ್ಯೆಗಳು ಹಣದ ಉಬ್ಬರವನ್ನು ತೀವ್ರಗೊಳಿಸುತ್ತಾ ನಡೆದಿವೆ. ಆದುದರಿಂದ ಹಣದ ಉಬ್ಬರದ ಸಮಸ್ಯೆ ಒಂದು ವಿಷವೃತ್ತ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಎಲ್ಲ ಆರ್ಥಿಕ ಸಮಸ್ಯೆಗಳನ್ನು ಒಂದೊಂದಾಗಿ ಎಚ್ಚರಿಕೆಯಿಂದ ಪರಿ ಶೀಲಿಸುತ್ತಾ, ಪ್ರತಿಯೊಂದಕ್ಕೂ ಸೂಕ್ತವಾದ ಪರಿಹಾರ ವನ್ನು ಕಂಡುಹಿಡಿಯುತ್ತಾ ಹೋದಾಗಲೇ ಹಣದ ಉಬ್ಬರ ಸಮಸ್ಯೆಗೂ ಪರಿಹಾರ ದೊರಕವುದು.

ಹಣದುಬ್ಬರ ಆರ್ಥಿಕ ಬೆಳವಣಿಗೆಗೆ ಅಗತ್ಯ ಎಂಬುದು ದಿಟ. ಇದರ ಬಗ್ಗೆ ಭಿನ್ನಾಭಿಪ್ರಾಯಗಳು ಕಡಮೆ. ಆದರೆ ಯಾವ ಮಟ್ಟದ ಹಣದುಬ್ಬರ ಇರಬೇಕು ಎನ್ನುವುದೇ ಮುಖ್ಯಪ್ರಶ್ನೆ. ಹಣದುಬ್ಬರ ಒಂದು ಘಟ್ಟದನಂತರ ಹುಚ್ಚುಕುದುರೆ ಇದ್ದಂತೆ.

ಆದರ ಸವಾರ ನಿಸ್ಸಹಾಯಕ. ಅದು ಅವನನ್ನು ಯಾವಕಡೆಗೆ ಕೊಂಡೊಯ್ಯುತ್ತದೋ ಅಲ್ಲಿಗೆ ಹೋಗಬೇಕು. ನಮ್ಮ ಅರ್ಥ ವ್ಯವಸ್ಥೆ ಇಂತಹ ಒಂದು ಮಟ್ಟವನ್ನು ಈಗ ಮುಟ್ಟಿದೆ. ರಾಷ್ಟ್ರದ ಎಲ್ಲ ಅರ್ಥಶಾಸ್ತ್ರತಜ್ಞರ ಪ್ರಕಾರ ಈಗ ಈ ಕಾಯಿಲೆಯನ್ನು ಗುಣಪಡಿಸದಿದ್ದರೆ, ಅರ್ಥವ್ಯವಸ್ಥೆ ಎಲ್ಲಿಗೆ ಹೋಗಿ ನಿಲ್ಲುತ್ತದೆ ಎಂದು ಯಾರೂ ಊಹಿಸಲಾರರು. ಇಷ್ಟೇ ಅಲ್ಲ, ಇದರಿಂದ ಅನೇಕ ತೀವ್ರತರವಾದ ರಾಜಕೀಯ ಹಾಗೂ ಸಾಮಾಜಿಕ ಬದಲಾವಣೆಗಳೂ ಅನಿವಾರ್ಯವಾಗುತ್ತವೆ. ಆದ್ದರಿಂದ ಹಣ ದುಬ್ಬರವನ್ನು ಈಗಲೇ ತಡೆಗಟ್ಟಿ ರಾಷ್ಟ್ರವು ಸಮಾಜವಾದವನ್ನು ಅಸ್ತಿತ್ವಕ್ಕೆ ತರುವುದು ಅತ್ಯಗತ್ಯ.

ಹಣದುಬ್ಬರವನ್ನು ತಡೆಗಟ್ಟುವುದು ಹೇಗೆ? ರಾಷ್ಟ್ರದ ಆರ್ಥಿಕ ಬಿಕ್ಕಟ್ಟಿಗೆ ಪರಿಹಾರವೇನು? ಈ ಪ್ರಶ್ನೆಗಳಿಗೆ ಇಂದು ನಾಲ್ಕಾರು ವರ್ಗದ ಜನ ನಾಲ್ಕಾರು ರೀತಿಯ ಉತ್ತರಗಳನ್ನು ಒದಗಿಸಬಹುದು. ರಾಜಕೀಯ ಪಟುಗಳು ತಮ್ಮದೇ ಆದ ಉತ್ತರಗಳನ್ನು ಹೊಂದಿರಬಹುದು. ರಾಷ್ಟ್ರದ ಸಂಪತ್ತಿನ ಮೇಲೆ ಹತೋಟಿ ಹೊಂದಿರುವ ಅಲ್ಪವರ್ಗದ ಜನ ತಮ್ಮ ಹಿತಕ್ಕೆ ಧಕ್ಕೆ ಬರದ ರೀತಿಯಲ್ಲಿ ತಮ್ಮದೇ ಉತ್ತರಗಳನ್ನು ಸೂಚಿಸ ಬಹುದು. ಆದರೆ, ಈ ಉತ್ತರಗಳು ಏಕೆ ಮುಖ್ಯವಾದವು ಎಂಬುದ ರಲ್ಲಿ ಯಾವ ಸಂಶಯವೂ ಇಲ್ಲ. ಏಕೆಂದರೆ ತಮ್ಮ ತಮ್ಮ ಗುಂಪಿನ ಹಿತಾಸಕ್ತಿ ಈ ವರ್ಗದವರಿಗೆ ಹಿರಿದೇ ಹೊರತು ಇತರ ವಿಷಯ ಗಳಲ್ಲ. ಇಂತಹ ಯಾವ ವೈಯಕ್ತಿಕ ಹಿತಾಸಕ್ತಿಗಳಿಲ್ಲದೆ, ಕೇವಲ ರಾಷ್ಟ್ರದ ಪ್ರಗತಿಯನ್ನು ಮಾತ್ರ ಧ್ಯೇಯವಾಗಿಟ್ಟು ಕೊಂಡಿರುವ ರಾಷ್ಟ್ರದ 100ಕ್ಕೂ ಹೆಚ್ಚಿನ ಪ್ರಮುಖ ಅರ್ಥ ವಿಜ್ಞಾನಿಗಳು ರಾಷ್ಟ್ರದ ಆರ್ಥಿಕ ಬಿಕ್ಕಟ್ಟು ಮತ್ತು ಹಣದುಬ್ಬರ

ಸಮಸ್ಯೆಗಳನ್ನು ಹೇಗೆ ಬಗೆಹರಿಸಬಹುದು ಎಂಬುವಕ್ಕೆ ಸೂಚನೆಗಳನ್ನು ಕೊಟ್ಟಿದ್ದಾರೆ. ಈ ಸಲಹೆಗಳನ್ನು ಅವರು ರಾಷ್ಟ್ರದ ಪ್ರಧಾನಮಂತ್ರಿಯವರಿಗೆ 23 ಫೆಬ್ರವರಿ, 1974 ರಂದು ಒಂದು ಕೈಹೊತ್ತಿಗೆಯ ರೂಪದಲ್ಲಿ ಸಲ್ಲಿಸಿದ್ದಾರೆ. ಈ ಹೊತ್ತಿಗೆಯಲ್ಲಿನ ಆಲೋಚನೆಗಳು, ಅತ್ಯಂತ ಗಾಢವಾದವೂ, ರಾಷ್ಟ್ರದ ಪ್ರಗತಿಗೆ ಅತ್ಯಂತ ಆವಶ್ಯಕವೂ ಯಾವ ಸ್ವಾರ್ಥ ಹಿತಾಸಕ್ತಿಗಳಿಲ್ಲದವೂ ಆಗಿವೆ. ಸಾಮಾನ್ಯವಾಗಿ ಅರ್ಥಶಾಸ್ತ್ರಜ್ಞರು ಒಮ್ಮತಕ್ಕೆಬರುವುದು ಅಪರೂಪ. ಪ್ರಸಿದ್ಧ ಅರ್ಥಶಾಸ್ತ್ರಜ್ಞ ಬಾರ್ಬಾರಾ ಮಾಟರ್‌ರವರು ಹೇಳಿರುವಂತೆ "ಆರು ಅರ್ಥವಿಜ್ಞಾನಿಗಳು ಸೇರಿದಕಡೆ ಏಳು ಅಭಿಪ್ರಾಯ ಹೊರಬರುವುದು ಸರ್ವಸಾಮಾನ್ಯ". ಆದರೆ ಈಬಾರಿ ರಾಷ್ಟ್ರದ ಆರ್ಥಿಕ ಸಮಸ್ಯೆಗಳು ಎಷ್ಟು ಗಂಭೀರವಾಗಿವೆಯೆಂದರೆ, ಅದರ ಪರಿಹಾರಗಳ ಬಗ್ಗೆ ಅವರು ಒಮ್ಮತಕ್ಕೆ ಬಂದಿದ್ದಾರೆ ಒಬ್ಬಿಬ್ಬರು ಅರ್ಥಶಾಸ್ತ್ರಜ್ಞರನ್ನು ಬಿಟ್ಟು. ತಾವು ಸಲಹೆ ಮಾಡಿರುವ ಸೂಚನೆಗಳನ್ನು ಕಾರ್ಯಗತ ಮಾಡಿದರೆ ರಾಷ್ಟ್ರ ಪ್ರಗತಿಯ ಕಡೆ ಹೊರಳುತ್ತದೆಂಬುದು ಅವರ ಆಶಯ. ಪ್ರಾಜ್ಞರು ರಾಷ್ಟ್ರದ ಜನಸಾಮಾನ್ಯರ ಸ್ಥಿತಿಗತಿಗಳನ್ನು ಉತ್ತಮಪಡಿಸುವ ದೃಷ್ಟಿಯಿಂದ ಈ ಸಲಹೆಗಳನ್ನು ತಕ್ಷಣವೇ ಕಾರ್ಯಗತ ಮಾಡಬೇಕೆಂದು ಕಳಕಳಿಯಿಂದ ಕೇಳಿಕೊಂಡಿದ್ದಾರೆ. ಈ ಅಮೂಲ್ಯವಾದ ಸಲಹೆಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವುದೇ ಈ ಕಿರು ಹೊತ್ತಿಗೆಯ ಉದ್ದೇಶ. ಪ್ರಧಾನಮಂತ್ರಿಯವರಿಗೆ ಸಲ್ಲಿಸಿರುವ ಸಲಹಾಪತ್ರದ ಅನುವಾದವನ್ನು ಇಲ್ಲಿ ನೀಡಲಾಗಿದೆ. ಅನುವಾದಕ್ಕೆ ಮುಂಚೆ ಹಿನ್ನೆಲೆಯಾಗಿ ನಮ್ಮ ರಾಷ್ಟ್ರದ ಹಣದುಬ್ಬರದ

ಪರಿಚಯವನ್ನು ಮಾಡಿಕೊಡಲು ಯತ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸಲಹೆಗಳನ್ನು ಓದಿದಾಗ, ಇವುಗಳನ್ನು ಕಾರ್ಯಗತ ಮಾಡುವುದು ಎಷ್ಟು ಜರೂರಾದ ವಿಷಯ ಎನ್ನುವುದು ಗೋಚರ ವಾಗುತ್ತದೆ.

ನಮ್ಮ ರಾಷ್ಟ್ರದಲ್ಲಿ ಪಂಚವಾರ್ಷಿಕ ಯೋಜನೆ ಪ್ರಾರಂಭ ವಾಗುವ ವೇಳೆಗೆ ಹಣದುಬ್ಬರ ಪರಿಸ್ಥಿತಿ ಇದ್ದುದು ದಿಟ. ಪ್ರಥಮ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಉತ್ಪಾದನೆ ಉತ್ತಮ ಮಟ್ಟದಲ್ಲಿ ಫಲಿಸಿದುದರಿಂದ ಹಣದ ನೀಡಿಕೆ ಹೆಚ್ಚಾದರೂ ಬೆಲೆಗಳು ಏರಲಿಲ್ಲ. ವಾಸ್ತವವಾಗಿ 1952-53ನ್ನು ಆಧಾರ ವರ್ಷವಾಗಿಟ್ಟುಕೊಂಡರೆ 1955ರ ಮಾರ್ಚಿಯಲ್ಲಿ ಬೆಲೆಗಳ ಸೂಚ್ಯಂಕವು 62ಕ್ಕೆ ಇಳಿದಿತ್ತು. ಈ ಒಂದು ಆಶಾಕಿರಣವೇ ಯೋಜನೆಯ ಕರ್ತೃಗಳನ್ನು ಅಶಾವಾದಿಗಳನ್ನಾಗಿ ಮಾಡಿದ್ದು. ಯೋಜನೆಯ ಅಭಿವೃದ್ಧಿ ಕಾರ್ಯಕ್ರಮಗಳು ಹಣದುಬ್ಬರಕ್ಕೆ ದಾರಿಮಾಡಿಕೊಡುವುದಿಲ್ಲವೆಂಬ ತಪ್ಪು ಲೆಕ್ಕಾಚಾರವನ್ನು ಅವರು ಮಾಡಿದರು. ಆದರೆ 1955 ರಿಂದ ಈ ಪರಿಸ್ಥಿತಿ ಸಂಪೂರ್ಣ ವಾಗಿ ಬದಲಾಯಿತು. ಆ ವರ್ಷದಿಂದ ಬೆಲೆಗಳು ಸತತವಾಗಿ ಏರುತ್ತಾ 1961ರ ಮಾರ್ಚ್ ವೇಳೆಗೆ ಬೆಲೆಗಳ ಸೂಚ್ಯಂಕ, 127.5 ನ್ನು ಮುಟ್ಟಿತ್ತು. 1656-61ರ ಅವಧಿಯಲ್ಲಿ ಬೆಲೆಗಳು ಶೇ. 35ರಷ್ಟು, 1961-66ರ ಅವಧಿಯಲ್ಲಿ ಶೇ. 24ರಷ್ಟು ಹೆಚ್ಚಾಯಿತು. ಯೋಜನೆಗೆ ರಜೆ ಕೊಡಲಾಗಿದ್ದ ಮೂರು ವರ್ಷ ಗಳಲ್ಲಿ ಬೆಲೆಗಳು ಶೇ. 24 ರಷ್ಟು ಹೆಚ್ಚಾದವು. ಬೆಲೆಗಳು ಏರಿ ದಂತೆ ರೂಪಾಯಿಯ ಕೊಳ್ಳುವಶಕ್ತಿ ಕಡಮೆಯಾಗುತ್ತ ಬಂದಿತು. ಬೆಲೆ ಏರಿಕೆಗೆ ಕಾರಣಗಳೇನೇ ಇರಲಿ ಇದು ಸಾಮಾನ್ಯ ಜನರ ಜನಜೀವನವನ್ನು ಅಸ್ತವ್ಯಸ್ತ ಮಾಡುತ್ತಾ ನಡೆಯಿತು.

ಒಡ ಬೋರೇಗೌಡನ ಹಣದಚೀಲಿ ವರ್ಷದಿಂದ ವರ್ಷಕ್ಕೆ ಕುಗ್ಗುತ್ತಾ ನಡೆದು 1973ರ ವೇಳೆಗೆ ರೂಪಾಯಿಯ ಆಂತರಿಕ ಮೌಲ್ಯ ಶೇ. 52ರಷ್ಟು ಕುಗ್ಗಿತು.

ಹಣದುಬ್ಬರ ಕೇವಲ ಶ್ರೀಮಂತ ವರ್ಗದ ಮೇಲೆ ಮಾತ್ರ ತನ್ನ ಕರಾಳ ಛಾಯೆಯನ್ನು ಬೀರಿದ್ದರೆ ಅದರ ಸಮಸ್ಯೆ ಈಗಿನಷ್ಟು ಗಂಭೀರವಾಗುತ್ತಿರಲಿಲ್ಲ. ಆದರೆ ಅದರ ಕೆಡಕುಗಳು ಮುಖ್ಯವಾಗಿ ರಾಷ್ಟ್ರದ ಮಧ್ಯಮ ಹಾಗೂ ಬಡವರ್ಗದ ಜನರ ಮೇಲೆ ಬಿದ್ದಿದೆ. ಈ ವರ್ಗ ಒಟ್ಟು ಜನಸಂಖ್ಯೆಯ ಸುಮಾರು ಶೇ. 75–80 ರಷ್ಟಾಗಿರುವುದರಿಂದ ಈ ವರ್ಗದ ಜನರ ಬೆನ್ನು ಮೂಳೆ ಈಗ ಮುರಿಯುತ್ತಿದೆ ಎಂದೇ ಹೇಳಬಹುದು. ಪ್ರಸ್ತುತದ ಹಣದುಬ್ಬರ ವರ್ಷ ಒಂದಕ್ಕೆ ಶೇ. 21.5 ರಷ್ಟು ಎಂದು ಅಂದಾಜು ಮಾಡಲಾಗಿದೆ. ಇದನ್ನು ಆರ್ಥಿಕ ಪರಿಭಾಷೆಯಲ್ಲಿ ನಾಗಾಲೋಟದ ಹಣದುಬ್ಬರವೆಂದು ಕರೆಯಲಾಗುತ್ತದೆ. ಈ ನಾಗಾಲೋಟವನ್ನು ಹೀಗೇ ಬಿಟ್ಟರೆ ಇದು ರಾಷ್ಟ್ರದ ಹಣಕಾಸು ವ್ಯವಸ್ಥೆಯನ್ನು ಸಂಪೂರ್ಣವಾಗಿ ಅಘಾತಗೊಳಿಸಿ ಲಕ್ಷೋಪಲಕ್ಷ ಜನರನ್ನು ನಿರ್ಗತಿಕರನ್ನಾಗಿ ಮಾಡುವುದರಲ್ಲಿ ಸಂಶಯವೇನಿಲ್ಲ. ಆದ್ದರಿಂದಲೇ ಇದಕ್ಕೆ ಪರಿಹಾರ ಬಹಳ ತುರ್ತಿನದಾಗಿದೆ. ಹಣದುಬ್ಬರದ ಹಿಂದೆ ಇರುವ ಶಕ್ತಿಗಳನ್ನು ಗುರುತಿಸಿ ಅದರ ಪ್ರಭಾವವನ್ನು ತಗ್ಗಿಸಿ ಈ ರಾಷ್ಟ್ರದ ಜನಸಾಮಾನ್ಯರು ನೆಮ್ಮದಿಯ ಜೀವನವನ್ನು ನಡೆಸುವಂತೆ ಮಾಡುವುದಕ್ಕಾಗಿಯೇ ಈ ರಾಷ್ಟ್ರದ ಅರ್ಥವಿಜ್ಞಾನಿಗಳು ತಮ್ಮ ಅಮೂಲ್ಯ ಸಲಹೆಗಳನ್ನು ರಾಷ್ಟ್ರವನ್ನಾಳುವವರ ಮುಂದಿಟ್ಟಿದ್ದಾರೆ. ಅದನ್ನು ಅಂಗೀಕರಿಸಿ ರಾಷ್ಟ್ರಕ್ಕೆ ಶ್ರೇಯಸ್ಸನ್ನುಂಟುಮಾಡುವುದು ಅಥವಾ ಕೇವಲ ಒಂದು

ವರ್ಗದ ಜನತೆಯೇ ಈ ರಾಷ್ಟ್ರದಲ್ಲಿ ಮುಂದುವರಿಯುವಂತೆ ಮಾಡುವುದು ನೀತಿ ನಿರ್ಮಾಪಕರ ಆಯ್ಕೆಗೆ ಬಿಟ್ಟ ವಿಷಯ.

ಭಾರತದ ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರಿಗೆ.

ಬೌದ್ಧಿಕ ಅರ್ಥವಿಜ್ಞಾನಿಗಳ ಪರವಾಗಿ ತಮಗೆ ಈ ಪತ್ರದ ಜೊತೆ, "ಹಣದುಬ್ಬರವನ್ನು ತಡೆಗಟ್ಟುವ ನೀತಿಯ ಬಗ್ಗೆ ಮನವಿ"ಯನ್ನು ಕಳುಹಿಸುತ್ತಿದ್ದೇನೆ. ಈ ಶಿಫಾರ್ಸು ಪತ್ರದ ಒಕ್ಕಣೆ ತಮ್ಮ ತೀವ್ರಗಮನವನ್ನು ಸೆಳೆಯುತ್ತದೆ ಮತ್ತು ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳುವಂತೆ ಮಾಡುತ್ತದೆ ಎಂಬ ಪ್ರಾಮಾಣಿಕ ನಂಬಿಕೆ ಇದೆ. ಪ್ರಸ್ತುತ ನಾಗಾಲೋಟದ ಹಣದುಬ್ಬರವನ್ನು ಸರಿಯಾದ ಕ್ರಮಗಳನ್ನು ಕೈಗೊಂಡು ಹತ್ತಿಕ್ಕದಿದ್ದರೆ, ರಾಷ್ಟ್ರವನ್ನು ಅದು ಯಾವ ಕೆಳಮಟ್ಟಕ್ಕೆ ಕೊಂಡೊಯ್ಯುತ್ತದೆ ಎಂಬುದರ ಬಗ್ಗೆ ಅರ್ಥವಿಜ್ಞಾನಿಗಳಿಗೆ ಅತೀವ ಗಾಬರಿಯಿದೆ.

ಬೇರೆ ಕೆಲವೊಂದು ಹಿತಾಸಕ್ತಿಗಳಿರುವ ಗುಂಪಿನವರಂತೆ ಅರ್ಥವಿಜ್ಞಾನಿಗಳು ಒಂದು ವ್ಯವಸ್ಥಿತವಾದ ಗುಂಪಿನ ಜನರಲ್ಲ. ಇಂಡಿಯನ್ ಎಕನಾಮಿಕ್ ಅಸೋಸಿಯೇಷನ್ ಸರ್ಕಾರಕ್ಕೆ ಆರ್ಥಿಕ ವಿಷಯಗಳ ಬಗ್ಗೆ ಮನವಿಯನ್ನು ಸಲ್ಲಿಸುವ ಸಂಸ್ಥೆಯಲ್ಲ. ಕೆಲವೊಂದು ನಿರ್ದಿಷ್ಟ ಬೌದ್ಧಿಕ ಚಟುವಟಿಕೆಗಳಿಗೆ ಮಾತ್ರ ಅದು ಸೀಮಿತವಾದದ್ದು. ಆದರೆ ನಮ್ಮಲ್ಲಿ ಈಗ ಬಹಳ ಜನ, ಭಾರತದ ಪ್ರಜೆಗಳಾಗಿ, ಅರ್ಥವಿಜ್ಞಾನಿಗಳಾಗಿ ಭಾರತದ ಪ್ರಸ್ತುತ ಬಿಕ್ಕಟ್ಟಿನ ಪರಿಹಾರಕ್ಕೆ ಸೂಚನೆಗಳನ್ನು ನೀಡದಿದ್ದರೆ ಕರ್ತವ್ಯಭ್ರಷ್ಟರಾಗುತ್ತೇವೆ ಎಂದು ಭಾವಿಸಿದ್ದಾರೆ. ಆದ್ದರಿಂದಲೇ ರಾಷ್ಟ್ರದ ನಾನಾಭಾಗವನ್ನು ಪ್ರತಿನಿಧಿಸುವ ಸುಮಾರು 100ಕ್ಕೂ ಹೆಚ್ಚು ಅರ್ಥವಿಜ್ಞಾನಿಗಳು ಈ ಶಿಫಾರ್ಸು ಪತ್ರವನ್ನು ಸಲ್ಲಿಸುವು

ದರ ಮೂಲಕ ನಮ್ಮ ನೈತಿಕ ಹೊಣೆಯನ್ನು ಪೂರೈಸಿಕೊಳ್ಳುವ ಆಲೋಚನೆಯನ್ನು ಮಾಡಿದ್ದಾರೆ. ಇದನ್ನು ಸಲ್ಲಿಸುತ್ತಿರುವ ಗುಂಪು ಪ್ರಾತಿನಿಧಿಕವಾದದ್ದು. ಆದ್ದರಿಂದ ರಾಷ್ಟ್ರದ ಅನೇಕ ಅರ್ಥವಿಜ್ಞಾನಿಗಳ ಆಲೋಚನೆಯನ್ನು ಇದು ಪ್ರತಿಬಿಂಬಿಸುತ್ತಿದೆ ಎಂಬುದನ್ನು ಗಮನಿಸಬೇಕು.

ಹಣದುಬ್ಬರದಂತಹ ಜಟಿಲ ವಿಷಯದಲ್ಲಿ ಎಲ್ಲ ಅರ್ಥವಿಜ್ಞಾನಿಗಳೂ ಸಂಪೂರ್ಣ ಒಮ್ಮತದ ಪರಿಹಾರಗಳನ್ನು ಹೊಂದಿರುವುದು ಸಾಧ್ಯವಿಲ್ಲ. ನಮ್ಮಲ್ಲಿ ಕೆಲವರು ಕೆಲವೊಂದು ಅಂಶಗಳಿಗೆ ಕಡಮೆ ಪ್ರಾಧಾನ್ಯತೆಯನ್ನು ಕೊಡಬೇಕೆಂಬ, ಕೆಲವು ಅಂಶಗಳ ಮೇಲೆ ಬೇರೆ ರೀತಿಯಲ್ಲಿ ನಡೆದುಕೊಳ್ಳಬೇಕೆಂಬ ಅಭಿಪ್ರಾಯವನ್ನು ಹೊಂದಿರುವುದು ಸಹಜ. ಆದರೆ, ಈ ಶಿಫಾರ್ಸುಗಳ ಬಗ್ಗೆ ಹೆಚ್ಚಿನಂಶ ಸಾರ್ವತ್ರಿಕ ಒಪ್ಪಂದವಿದೆಯೆಂದು ಹೇಳಬಯಸುತ್ತೇನೆ. ಕೆಲವು ಸ್ಪಷ್ಟ ಕಾರಣಗಳಿಗಾಗಿ ಈ ಶಿಫಾರ್ಸುಗಳ ವಿಸ್ತೃತ ವಿವರಣೆಗಳನ್ನು ನಾವು ನೀಡಿಲ್ಲ. ಆದರೆ ಇದರ ಮುಖ್ಯ ಭಾವನೆಗಳನ್ನು ಒಪ್ಪಿಕೊಂಡರೆ ವಿವರಣೆಗಳನ್ನು ನೀಡುವುದು ಅಷ್ಟು ಕಷ್ಟವಾಗುವುದಿಲ್ಲ; ವಿವರಣೆಗಳನ್ನು ನಾವು ನೀಡಿಲ್ಲದಿದ್ದರೂ, ನಾವು ಮೊದಲು ಆಲೋಚಿಸಿದ್ದಕ್ಕಿಂತ ಈ ಪತ್ರ ಹೆಚ್ಚು ದೊಡ್ಡದಾಗಿಬಿಟ್ಟಿದೆ. ಇದಕ್ಕೆ ಮುಖ್ಯಕಾರಣ ನಮ್ಮ ಜೊತೆಗೆಅರ್ಥವಿಜ್ಞಾನಿಗಳನೇಕರ ವಿಚಾರಗಳನ್ನು ಇದರೊಳಗೆ ಸೇರಿಸಬೇಕಾಗಿ ಬಂದದ್ದು.

ಮನವಿಯ ಕೆಲವು ಭಾಗಗಳು ಬಹಳಷ್ಟು ತಾಂತ್ರಿಕ ಪರಿಭಾಷೆಯಿಂದ ಕೂಡಿದೆ ಎಂಬುದರ ಅರಿವು ನಮಗಿದೆ. ಆದರೆ ಇದನ್ನು ತಪ್ಪಿಸಲು ಸಾಧ್ಯವಾಗಲಿಲ್ಲ. ಆದರೆ ನಾವು ನಮ್ಮ ಶಿಫಾರ್ಸುಗಳ ಸಾರಾಂಶವನ್ನು ಬಹಳ ಸರಳ ಭಾಷೆಯಲ್ಲಿ

ನೀಡಿದ್ದೇವೆ. ಖೋತಾ ಹಣ ಪೂರೈಕೆಗಿಂತಲೂ, ಬೇರೆ ಅನೇಕ ಕಾರಣಗಳಿಂದಾಗಿ, ಹಣ ನೀಡಿಕೆಯ ಹೆಚ್ಚಳವು ಆಗತ್ಯ ಮಟ್ಟಕ್ಕಿಂತಲೂ ಹೇಗೆ ಹೆಚ್ಚಾಗಿದೆ ಎಂಬುದನ್ನು ನಮ್ಮ ಸೂಚನೆಗಳು ಸ್ಪಷ್ಟವಾಗಿ ತೋರಿಸುತ್ತವೆ. ಈ ಅಂಶವನ್ನು ಸರಕಾರ ಗಮನಿಸಿಲ್ಲ. ಇದೇ ರೀತಿಯ ಅಂಥ ಮನೋಭಾವ ಅಥವಾ ತಪ್ಪುಗ್ರಹಿಕೆ ಐದನೇಯೋಜನೆಯ ವೆಚ್ಚ ನಿಗದಿಗಳು ಹಣಮುಬ್ಬರರಹಿತವಾದವು ಎಂಬ ಕಲ್ಪನೆಗೆ ದಾರಿಮಾಡಿ ಕೊಟ್ಟವೆ. ನಾವು ತೋರಿಸಿರುವಂತೆ, 5ನೇ ಯೋಜನೆಯಲ್ಲಿ ಸೂಚಿಸಿರುವ ಹಣಕಾಸು ವೆಚ್ಚಗಳನ್ನು ಕೈಗೊಂಡರೆ ಬೆಲೆಯು ಮಟ್ಟವು ಶೇ. 40ರಷ್ಟು ಹೆಚ್ಚಾಗುತ್ತದೆ. ಇದೊಂದು ದೊಡ್ಡ ಆಪಘಾತ, ಇದರಿಂದ ನಾವು ಪಾರಾಗಲೇಬೇಕು ಎಂಬುದನ್ನು ತಾವು ಒಪ್ಪುತ್ತೀರಿ ಎಂದು ಭಾವಿಸುತ್ತೇವೆ. ಇದಕ್ಕೆ ಪರಿಹಾರ ವನ್ನು ಕಂಡುಹಿಡಿಯಲೇಬೇಕು. ರಾಷ್ಟ್ರದ ಈ ಆರ್ಥ ವ್ಯವಸ್ಥೆಯ ದೃಢತೆಗೆ ಪ್ರಸ್ತುತ ಪರಿಸ್ಥಿತಿ ಮತ್ತು ಪ್ರಸ್ತುತ 5ನೇ ಯೋಜನೆಯ ವ್ಯವಸ್ಥೆ ಬಹಳ ಆಪಾಯಕಾರಿಯಾದದ್ದು ಎಂಬುದರ ಬಗ್ಗೆ ನಮಗೆ ಬಹಳ ಖಚಿತತೆ ಇರುವುದುರಿಂದಲೇ ಇಂತಹ ಶಿಫಾರ್ಸು ಪತ್ರವೊಂದಕ್ಕೆ ನಾವು ಪ್ರಯತ್ನಿಸಿದ್ದೇವೆ.

ಮನವಿ ಪತ್ರದ ಪ್ರತಿಗಳನ್ನು ನಾವು ವಿತ್ತಖಾತೆಯ ಮಂತ್ರಿಗಳು, ಕೇಂದ್ರಸರ್ಕಾರದ ವಿವಿಧ ಖಾತೆಗಳು, ರಾಜ್ಯ ಸರ್ಕಾರಗಳ ಮುಖ್ಯಮಂತ್ರಿಗಳು, ವಿತ್ತ ಮಂತ್ರಿ ಗಳು, ವಿರೋಧಪಕ್ಷದ ನಾಯಕರು, ರಿಸರ್ವ್ ಬ್ಯಾಂಕ್‌ನ ಗೌರ್ನರ್ ಮತ್ತು ಡೆಪ್ಯೂಟಿ ಗೌರ್ನರ್‌ಗಳು ಮತ್ತು ಪತ್ರಿಕೆಗಳು, ಛೇಂಬರ್ ಆಫ್ ಕಾಮರ್ಸ್ ಮತ್ತು ಕಾರ್ಮಿಕ ಸಂಘಗಳಿಗೆ ಕಳುಹಿಸುತ್ತಿದ್ದೇವೆ.

ರಾಷ್ಟ್ರದ ಮುಂದೆ ಇರುವ ಸಮಸ್ಯೆಯ ದೃಷ್ಟಿಯಿಂದ ಈ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯದಿದ್ದರೆ ರಾಷ್ಟ್ರ ಅಧೋಗತಿಗೆ ಇಳಿದುಬಿಡುತ್ತದೆ ಎನ್ನುವ ಕಾರಣವಿರುವುದರಿಂದ ಈ ಶಿಫಾರ್ಸುಪತ್ರ ತಮ್ಮ ಗಮನವನ್ನು ಆದ್ಯವಾಗಿ ಆಕರ್ಷಿಸುತ್ತದೆ ಎಂದು ಪ್ರಾಮಾಣಿಕವಾಗಿ ಆಶಿಸುತ್ತೇವೆ.

ತಮ್ಮ

ಸಿ. ಎಸ್. ವಕೀಲ

ಮನವಿ ಪತ್ರದ ಸಹಿದಾರರ ಪರವಾಗಿ

## ಹಣದ ಸರಬರಾಜು

ಬೆಲೆಗಳು ಗಗನಕ್ಕೇರುತ್ತಿರುವುದು, ಅದರಲ್ಲೂ ಅನು ಭೋಗಕ್ಕೆ ಅತ್ಯಂತ ಆವಶ್ಯಕವಾದ ಸರಕುಗಳ ಬೆಲೆಗಳು ದಿನೇ ದಿನೇ ಹೆಚ್ಚಾಗುತ್ತಿರುವುದು, ರಾಷ್ಟ್ರದ ಜನರ ತೀವ್ರ ದುಃಖಕ್ಕೆ, ಅಸಂತೋಷಕ್ಕೆ ಮೂಲಕಾರಣವಾಗಿದೆ. 1969–70 ರಿಂದ ಈ ರೀತಿ ಬೆಲೆಗಳ ಏರಿಕೆ ನಡೆದೇ ಇದೆ. 1969–70 ಮತ್ತು 1974 ರ ಜನವರಿ ಮೊದಲನೇ ವಾರದ ನಡುವೆ ಬೆಲೆಗಳು ಶೇ. 50ರಷ್ಟು ಹೆಚ್ಚಾಗಿವೆ. ಪ್ರಸ್ತುತದಲ್ಲಿ ಬೆಲೆಗಳು ವರ್ಷಂ ಪ್ರತಿ ಶೇ. 25ರಷ್ಟು ಹೆಚ್ಚಾಗುವ ಪ್ರವೃತ್ತಿಯನ್ನು ಹೊಂದಿವೆ. 1973–74 ರ ಸುಗ್ಗಿಯಲ್ಲಿ ಅತ್ಯುತ್ತಮ ಫಸಲು ಬಂದಿದ್ದರೂ ಸಹ ಬೆಲೆ ಏರಿಕೆಗೆ ಯಾವ ತಡೆಯೂ ಇಲ್ಲದೆ ಮುಂದುವರಿದಿದೆ. ಇದಕ್ಕೆ ಕಾರಣ ಜನರ ಮೂಲಭೂತ ಆವಶ್ಯಕ ವಸ್ತುಗಳ, ಅನುಭೋಗ ವಸ್ತುಗಳ ಉತ್ಪಾದನೆ ಮತ್ತು ಹಣದಾಸ್ತಾನಿನ ಬೆಳವಣಿಗೆಗಳ ನಡುವೆ ಉಂಟಾಗಿರುವ ವಿಪರೀತ ಅಸಮತೋಲನ. 1969ರ ಕೊನೆ ಮತ್ತು 1974ರ ಜನವರಿ ಮೂರನೆಯ ವಾರದ ನಡುವಣ ಅಂತರದಲ್ಲಿ ಹಣದ ಸರಬರಾಜು ಶೇ. 70ರಷ್ಟು, ಸಗಟು ಬೆಲೆಗಳು ಶೇ. 60 ರಷ್ಟು ಮತ್ತು ಆಹಾರಪದಾರ್ಥಗಳ ಬೆಲೆಗಳು ಶೇ. 62ರಷ್ಟು ಹೆಚ್ಚಾಗಿವೆ. ಆವಶ್ಯಕ ವಸ್ತುಗಳ ನೀಡಿಕೆ ಮತ್ತು ನೈಜ ಉತ್ಪನ್ನ ಕೇವಲ ಶೇ. 12ರಷ್ಟು ವೃದ್ಧಿಯಾಗಿದೆ. 1969–70ಕ್ಕೆ ಹೋಲಿಸಿದಂತೆ ಹೆಚ್ಚಳ 1973–74 ರಲ್ಲಿ ಕೇವಲ ಶೇ. 10 ರಷ್ಟಾಗಿದೆ ಅಷ್ಟೆ.

ಜನರ ಕಾಲಾವಧಿ ಠೇವಣಿಗಳಿಗಿಂತ, ಹೆಚ್ಚಿನ ಮಟ್ಟದಲ್ಲಿ ಬ್ಯಾಂಕುಉದ್ದರಿಗಳು, ಸರ್ಕಾರ ಮತ್ತು ಕೈಗಾರಿಕಾ ರಂಗಗಳಿಗೆ

ಎಷ್ಟು ಹಣ ಹರಿಯುತ್ತದೆ ಎಂಬುದು ಹಣದ ದಾಸ್ತಾನಿನ ವಾರ್ಷಿಕ ಬೆಳವಣಿಗೆಯನ್ನು ನಿಗದಿ ಮಾಡುವ ಅತ್ಯಂತ ಸಮೀಪ ಅಂಶವಾಗಿದೆ. 1969ರ ಕೊನೆಯ ಭಾಗ ಮತ್ತು 1974ರ ಜನವರಿ ಮೂರನೇವಾರದ ನಡುವೆ ಬ್ಯಾಂಕುಗಳ ಉದ್ದರಿ ಶೇ. 87ರಷ್ಟು ವೃದ್ಧಿಗೊಂಡಿವೆ. ಪ್ರಸ್ತುತದ ಹಣ ಸರಬರಾಜಿನ ವಾರ್ಷಿಕ ಹೆಚ್ಚಳವಾದ ಶೇ. 20ರ ಬೆಳವಣಿಗೆಯನ್ನು ನಾವು ಬ್ಯಾಂಕುಗಳು ಸರ್ಕಾರಕ್ಕೆ ಹಾಗೂ ವಾಣಿಜ್ಯ ರಂಗಕ್ಕೆ ವಿಸ್ತರಿಸುವ ಉದ್ದರಿಗಳಲ್ಲಿ ಗುರುತಿಸಬಲ್ಲವರಾಗಿದ್ದೇವೆ.

ಸರ್ಕಾರಿ ರಂಗಕ್ಕೆ ಇಂತಹ ಅದ್ವಿತೀಯ ಪ್ರಮಾಣದ ಸಾಲ ನೀಡಿಕೆಯು, ಸರ್ಕಾರ ಹಿಂದು-ಮುಂದು ನೋಡದೆ ಹಣ ಬಾಹುಳ್ಯವನ್ನುಂಟುಮಾಡದ ಆದಾಯಗಳನ್ನು ವೃದ್ಧಿಸಿಕೊಳ್ಳದೆ ಸರ್ಕಾರಿ ವೆಚ್ಚಗಳನ್ನು ಮಾಡುತ್ತಿರುವುದರಿಂದ ಉಂಟಾದುದಾಗಿದೆ. ವಾಸ್ತವವಾಗಿ ಸರ್ಕಾರಿ ವೆಚ್ಚದಲ್ಲಿ ಹಣ ಬಾಹುಳ್ಯವನ್ನುಂಟು ಮಾಡದಿರುವ ವೆಚ್ಚದ ಅಂಶವು ಕಡಮೆಯಾಗಿರುವುದು ಗಮನಾರ್ಹ. ಬ್ಯಾಂಕುಗಳು 1968–69 ರಲ್ಲಿ ಸರ್ಕಾರಿ ವೆಚ್ಚದ ಶೇ. 6ರಷ್ಟು ಸಾಲವನ್ನು ಸರ್ಕಾರಕ್ಕೆ ಒದಗಿಸಿದ್ದರೆ 1972–73ರಲ್ಲಿ ಈ ಶೇಕಡಾಂಶ 13ಕ್ಕೆ ಏರಿದೆ. ನಿವ್ವಳ ರಾಷ್ಟ್ರೀಯ ಉತ್ಪನ್ನ ಮತ್ತು ದೃಢ ರಾಷ್ಟ್ರೀಯ ವೆಚ್ಚದ ನಡುವಣ ಪ್ರಮಾಣ ಶೇ. 20ರೊಂದಿಗೆ ರಾಷ್ಟ್ರೀಯ ಉತ್ಪನ್ನ ಮತ್ತು ತೆರಿಗೆ ಆದಾಯಗಳ ನಡುವಣ ಶೇ. 12–13 ರ ಪ್ರಮಾಣದಲ್ಲಿ ರಾಷ್ಟ್ರೀಯ ನಿವ್ವಳ ಆದಾಯ ಮತ್ತು ತೆರಿಗೆಯ (ಮತ್ತು ನೆರವಿನ) ನಡುವಣ ಪ್ರಮಾಣ ವ್ಯತ್ಯಾಸಗೊಳ್ಳುತ್ತಿರುವ ಸಂದರ್ಭದಲ್ಲಿ ಸರಕಾರೀ ವೆಚ್ಚದಲ್ಲಿನ ಸಂಚಯ

ಭಾಗವು ಶೇ. 4.5–5ಕ್ಕೆ ಇಳಿದಿದೆ. 1965-66ರಲ್ಲಿ ಈ ಭಾಗವು ಶೇ. 7.6 ರಷ್ಟಾಗಿತ್ತು. ವರ್ಷದಿಂದ ವರ್ಷಕ್ಕೆ ನಾವು ನೋಡುತ್ತಿರುವ ಖೋತಾ ಬಜೆಟ್‌ನ ಮೊತ್ತಗಳು ಬಂಡವಾಳದ ಸಂಚಯದ ಆರ್ಥಿಕ ದೃಷ್ಟಿಯಿಂದ ಅಲ್ಪೋಪ ಕಾರಿಗಳಾಗಿವೆ. ಅದು ಅರ್ಥವ್ಯವಸ್ಥೆಯಲ್ಲಿ ಮೂಲಾವಶ್ಯಕ ಸರಕುಗಳ ಉತ್ಪನ್ನಗಳಿಗೆ ಜೋರಿಯಾಗಿದ್ದು ಅಂತಹ ಸರಕುಗಳ ಉತ್ಪಾದನ ಶಕ್ತಿಯ ಬೆಳವಣಿಗೆಗೆ ಹೆಚ್ಚಿನ ಕಾಣಿಕೆಯನ್ನು ನೀಡುತ್ತಿಲ್ಲ. ಮೂಲಾವಶ್ಯಕ ಸರಕುಗಳೆಂದರೆ ಕೂಲಿ-ಸರಕು ಗಳು ಮತ್ತು ಕೂಲಿಸರಕುಗಳ ಉತ್ಪಾದನೆಗೆ ತೊಡಗಿಸಲಾಗುವ ಆದಾನಗಳು.

ವಾಣಿಜ್ಯರಂಗಕ್ಕೆ ಹೆಚ್ಚಿನ ಬ್ಯಾಂಕು ಸಾಲವೃದ್ಧಿಯು ವಾಣಿಜ್ಯ ಬ್ಯಾಂಕುಗಳ ನಗದು ಮತ್ತು ದ್ರವ್ಯತೆಗಳ ಆಧಾರ ಗಳನ್ನು ಬೆಳಸಿಕೊಳ್ಳುವುದರ ಮೂಲಕ ನಡೆಯುತ್ತದೆ. ಇದು ಸರ್ಕಾರಕ್ಕೆ ವಾಣಿಜ್ಯಬ್ಯಾಂಕುಗಳ ಹೆಚ್ಚಿನ ಸಾಲದ ಆನುಷಂಗಿಕ ಪರಿಣಾಮವಾಗಿ ಆಗಿದೆ. ಇದರ ಪರಿಣಾಮಗಳು ನಮ್ಮ ಅರ್ಥ ವ್ಯವಸ್ಥೆಯಲ್ಲಿ ಗಮನಾರ್ಹ. ದೊಡ್ಡ ಹಾಗೂ ಮಧ್ಯಮ ಪ್ರಮಾಣದ ಖಾಸಗೀ ಉದ್ಯಮಗಳ ಬ್ಯಾಂಕುಸಾಲ ಮತ್ತು ದಾಸ್ತಾನುಗಳ ನಡುವಣ ಅನುಪಾತವು ಏರುತ್ತಾಹೋಗುತ್ತಿದೆ. ಸಾರ್ವಜನಿಕ ಉದ್ಯಮ ಮತ್ತು ವಾಣಿಜ್ಯ ರಂಗಗಳಲ್ಲಿ ದಾಸ್ತಾನು ಮತ್ತು ಮಾರಾಟಗಳ ನಡುವಿನ ಸಂಬಂಧದಲ್ಲಿ ಒಲವು ದಾಸ್ತಾನಿನ ಕಡೆಗೆ ಅಧಿಕವಾಗಿದೆ. ಸರ್ಕಾರೀ ವಾಣಿಜ್ಯ ಸಂಸ್ಥೆ ಗಳು ತಮ್ಮ ಸಂಖ್ಯೆ ಮತ್ತು ಕಾರ್ಯವ್ಯಾಪ್ತಿಯನ್ನು ಹೆಚ್ಚಿಸಿ ಕೊಳ್ಳುತ್ತಿದ್ದು ವಿಪರೀತವಾಗಿ ಬ್ಯಾಂಕುಗಳ ಮೇಲೆ ಅವಲಂಬಿತ ವಾಗಿವೆ. ವಾಸ್ತವವಾಗಿ ಕೈಗಾರಿಕೆ ಮತ್ತು ವಾಣಿಜ್ಯ ರಂಗಗಳಿಗೆ

ದಿನದಿಂದ ದಿನಕ್ಕೆ ಬೆಳೆಯುತ್ತಿರುವ ಸಾಲವು ಕೈಗಾರಿಕಾ ಉತ್ಪಾದನೆ ಅಥವಾ ಒಟ್ಟು ಉತ್ಪಾದನೆಯ ಬೆಳವಣಿಗೆಯೊಂದಿಗೆ ಫಲಪ್ರದವಾದ ಸಂಬಂಧವನ್ನು ಹೊಂದಿಲ್ಲ.

ಆವಶ್ಯಕ ವಸ್ತುಗಳ ಉತ್ಪಾದನೆಯಲ್ಲಿ, ಅತ್ಯಂತ ಮಂದ ಗತಿಯ ಬೆಳವಣಿಗೆಗೆ ಎರಡು ಸಮ್ಮಿಶ್ರ ಕಾರಣಗಳಿವೆ. ಅವುಗಳೆಂದರೆ ಮೂಲಬಂಡವಾಳ ಸಂಚಯದ ಅತ್ಯಂತ ನಿಧಾನವಾದ ಬೆಳವಣಿಗೆ ಮತ್ತು ಮೂಲ ಆವಶ್ಯಕ ವಸ್ತುಗಳ ಹಾಗೂ ಹೂಡಿಕೆಗಳ ಅನುಪಾತದ ಬೆಳವಣಿಗೆಯ ಹಿಂಜರಿಕೆ. 1950ರ ದಶಕದಲ್ಲಿ ಮೂಲ ಆವಶ್ಯಕ ವಸ್ತುಗಳ ಉತ್ಪಾದನೆಯು ವರ್ಷವೊಂದಕ್ಕೆ ಸರಾಸರಿ 3ರಂತೆ ಹೆಚ್ಚಾಯಿತು. 1960ರ ದಶಕದಲ್ಲಿ ಮತ್ತು 1971-72 ರವರೆಗೆ ಅದು ಕೇವಲ ಶೇ. 2 ರಂತೆ ಹೆಚ್ಚಾಯಿತು ಅಷ್ಟೆ. 1965-66 ರಿಂದ ಸರ್ಕಾರದ ವೆಚ್ಚವು ಮುಖ್ಯವಾಗಿ ಅಭಿವೃದ್ಧಿ ಮತ್ತು ಬಂಡವಾಳೇತರ ಬಾಬ್ತುಗಳಿಗಾಗಿ ಹೆಚ್ಚಿನ ಒಲವನ್ನು ಪಡೆದಿರುವುದನ್ನು ನಾವು ನೋಡುತ್ತೇವೆ. ಅರ್ಥವ್ಯವಸ್ಥೆಯಲ್ಲಿ ಅತ್ಯಂತ ಆವಶ್ಯಕ ವಸ್ತುಗಳ ದಾಸ್ತಾನು ಸಾಕಷ್ಟಿಲ್ಲ. ಅದರಲ್ಲಿ ಮುಖ್ಯವಾಗಿ ಅನೇಕ ಸರಕುಗಳ ಹಂಚಿಕೆಯ ವ್ಯವಸ್ಥೆಯನ್ನು ಸರ್ಕಾರವೇ ಕೈಗೊಂಡಿರುವಾಗ ಹಂಚಿಕೆಯ ಸಂಸ್ಥೆಗಳ ಬಳಿ ಹವಾಮಾನ ಹದಗೆಟ್ಟು ಅಥವಾ ಇತರ ಕಾರಣಗಳಿಂದ ಉಂಟಾಗಬಹುದಾದ ಮೂಲ ಆವಶ್ಯಕ ವಸ್ತುಗಳ ಕೊರತೆಯನ್ನು ಎದುರಿಸಲು ಬೇಕಾದ ಪ್ರಮಾಣದಲ್ಲಿ ದಾಸ್ತಾನಿಲ್ಲ. ವ್ಯಾಪಾರಸ್ಥರು ಮತ್ತು ಅತ್ಯಂತ ಹೆಚ್ಚಿನ ಕೃಷಿ ವಸ್ತುಗಳನ್ನು ಉತ್ಪಾದಿಸುವ ರೈತರ ಬಳಿ ಅಧಿಕ ಪ್ರಮಾಣದ ನಗದು ದ್ರವ್ಯತೆ ಇದೆ. ಬೆಲೆ ಹೆಚ್ಚಳದ ಸತತ ನಿರೀಕ್ಷಣೆಗಳು, ಮುಕ್ತ ಮಾರುಕಟ್ಟೆಯ

ಬೆಲೆಗಳು ಮತ್ತು ಸರ್ಕಾರ ತಾನು ಕೃಷಿವಸ್ತುಗಳನ್ನು ತೆಗೆದು ಕೊಳ್ಳುವುದಕ್ಕೆ ನಿಗದಿ ಮಾಡಿರುವ ಬೆಲೆಗಳು ಇವುಗಳ ನಡುವೆ ವ್ಯತ್ಯಾಸಗಳು ಇರುವುದರಿಂದ ಇಂತಹ ಪರಿಸ್ಥಿತಿಗಳು, ಸರ್ಕಾರಿ ಹಂಚಿಕೆಯ ವ್ಯವಸ್ಥೆಗೆ ಸರಿಯಾದ ಪ್ರಮಾಣದಲ್ಲಿ ಧಾನ್ಯಗಳ ನೀಡಿಕೆಯಾಗದಂತೆ ಮಾಡಿ ವಿತರಣೆಯ ಕ್ರಮವನ್ನು ಅಸ್ತವ್ಯಸ್ತ ಮಾಡಿರುವದಷ್ಟೇ ಅಲ್ಲದೆ,ಆಹಾರಲೂಟಿ ಮುಂತಾದ ಪ್ರಕರಣಗಳಿಗೆ ದಾರಿಮಾಡಿಕೊಟ್ಟಿದೆ. ಇಷ್ಟೇ ಅಲ್ಲದೆ ಉತ್ಪಾದನೆಯನ್ನು ಮುಂದುವರಿಸಿಕೊಂಡು ಹೋಗಲು ಬೇಕಾಗುವ ಆದಾನಗಳನ್ನು ಆಮದು ಮಾಡಿಕೊಳ್ಳಲು ಇರುವ ವಿದೇಶೀ ವಿನಿಮಯದ ಕೊರತೆ, ಖಾಸಗಿ ಸರ್ಕಾರೀ ಕೈಗಾರಿಕೆಗಳಲ್ಲಿ ಕಾರ್ಮಿಕರು ಮತ್ತು ಮಾಲಿಕರ ನಡುವಣ ವಿವಾದಗಳು, ಉತ್ಪಾದನೆಯನ್ನು ಕುಂಠಿತಗೊಳಿಸಿವೆ. ಈ ವಿವಾದಗಳು ಈ ಹಣ ದುಬ್ಬರ ವಿಧಾನದಿಂದ ಸಿಡಿದಿರುವ ಕಿಡಿಯೇ ಆಗಿದೆ.

## ಕಪ್ಪು ಹಣ

ಮೂಲಾವಶ್ಯಕ ವಸ್ತುಗಳ ಅನಿಶ್ಚಿತ ನೀಡಿಕೆ ಮತ್ತು ಅವುಗಳ ಕೊರತೆ, ಅತ್ಯಂತ ಅವ್ಯವಸ್ಥಿತವಾಗಿ ನಡೆಯುತ್ತಿರುವ ಸರ್ಕಾರಿ ನಿಯಂತ್ರಣಗಳ ಹಿನ್ನೆಲೆಯಲ್ಲಿ ಅನೇಕ ತೊಂದರೆಗಳಿಗೆ ಕಾರಣವಾಗಿದೆ. ಈ ವಿತರಣೆಯ ವ್ಯವಸ್ಥೆಯು ಹಣಕಾಸು ವಿಸ್ತರಣೆಯೊಂದಿಗೆ ಸೇರಿಕೊಂಡು ಅರ್ಥವ್ಯವಸ್ಥೆಯಲ್ಲಿ ಅನೇಕ ಪರಿಣಾಮಗಳನ್ನು ಉಂಟುಮಾಡುತ್ತಿದೆ. ಅಕ್ರಮ ಸಂಗ್ರಹ, ಸಟ್ಟಾವಾಣಿಜ್ಯ, ಆಸ್ತಿವ್ಯವಹಾರಗಳು ಮತ್ತು ಧೀರ್ಘಕಾಲ ಬಾಳಿಕೆ ಬರುವ ಅನುಭೋಗಿ ಸರಕುಗಳ ವ್ಯವಹಾರ, ಈ ರಂಗಗಳಲ್ಲಿರುವವರಿಗೆ ಅತ್ಯಂತ ದೊಡ್ಡ ಪ್ರಮಾಣದ ಅನಿರೀಕ್ಷಿತ

ಲಾಭಗಳು ದೊರಕುತ್ತಿವೆ. ಈ ಹಣದ ಮೇಲೆ ತೆರಿಗೆಯ ಅಧಿಕಾರಿಗಳಿಗೆ ಯಾವ ಅಧಿಕಾರವೂ ಇಲ್ಲ. ಈ ವ್ಯವಹಾರಗಳನ್ನು ನಡೆಸುತ್ತಿರುವ ಜನರು ತಮ್ಮ ಕಾಳಸಂತೆ ವ್ಯಾಪಾರಕ್ಕೆ ಆದಾಯ ತೆರಿಗೆಯನ್ನೇನೂ ಕೊಡುತ್ತಿಲ್ಲ. ಈ ವ್ಯವಹಾರಗಳಿಂದ ಸಂಪನ್ಮೂಲಗಳು ಅನಧಿಕೃತ ವೃತ್ತಿಗಳಿಗೆ ಪಲ್ಲಟಗೊಂಡಿವೆ. ಅನೇಕ ವಿರಳ ಸರಕುಗಳಿಗೆ ಹಣ ಬೆಲೆ ಹೆಚ್ಚಳವನ್ನು ಅಧಿಕೃತ ಸಗಟು ಬೆಲೆಗಳ ಸೂಚ್ಯಂಕಗಳು ಸರಿಯಾಗಿ ವ್ಯಕ್ತಪಡಿಸುತ್ತಿಲ್ಲ. 1960ರ ಅನುಭವದ ಆಧಾರದ ಮೇಲೆ ಭಾರತದಲ್ಲಿ ಹಣದ ಆದಾಯ-ಪರಿಚಲನಾ ವೇಗವನ್ನು ಅದರ ಇತ್ತೀಚಿನ ಹೆಚ್ಚಿನ ಮಟ್ಟವಾದ 5.0ಯಿಂದ 5.2 ಎಂದಿಟ್ಟುಕೊಂಡರೆ 1972-73ರ ನಿವ್ವಳ ಉತ್ಪನ್ನದ ಹಣಮೌಲ್ಯವು 47,500 ಕೋಟಿಗಳಿಂದ 49 ಸಾವಿರ ಕೋಟಿಗಳಿರಬೇಕು. ಆ ವರ್ಷದ ಅಧಿಕೃತ ನಿವ್ವಳ ಉತ್ಪನ್ನದ ತಾತ್ಕಾಲಿಕ ಅಂದಾಜು 38,900 ಕೋಟಿಗಳಾಗಿವೆ. ಇದು ಆ ವರ್ಷಕ್ಕೆ 9ಸಾವಿರದಿಂದ 10ಸಾವಿರ ಕೋಟಿ ರೂ.ಗಳ "ಕಪ್ಪು" ಆದಾಯ ಮತ್ತು 1800 ಕೋಟಿ ರೂ.ಗಳ ಕಪ್ಪು ಹಣದ ಲೆಕ್ಕಾಚಾರವನ್ನು ನಮಗೆ ಕೊಡುತ್ತದೆ. 'ಕಪ್ಪು' ಆದಾಯದ ಹೆಚ್ಚಿನ ಭಾಗವು ಅನಿರೀಕ್ಷಿತ ಲಾಭಗಳು, ನಾನಾ ರೀತಿಯ ಗೇಣಿಗಳ ರೂಪದಲ್ಲಿ ಭಾಗಶಃ ಉತ್ಪಾದಕರಿಗೆ, ಭಾಗಶಃ ವಿವಿಧ ಮಧ್ಯಸ್ಥಿಕೆದಾರರಿಗೆ ಸಂದಾಯವಾಗುತ್ತಿದೆ. ಕಪ್ಪು ಹಣದಲ್ಲಿ ಒಂದು ಭಾಗವು ಪರ್ಮಿಟ್‌ಗಳು, ಲೈಸನ್ಸ್‌ಗಳು, ವಿರಳ ವಸ್ತುಗಳು ಮತ್ತು 'ಇತರ ನಾನಾರೀತಿಯ ಹಕ್ಕುಗಳನ್ನು ವಿತರಣೆ ಮಾಡುವವರಿಗೂ ಸಂದಾಯವಾಗುತ್ತಿದೆ. ಈ ಒಂದು ಕ್ರಮವು ಅರ್ಥವ್ಯವಸ್ಥೆಯಲ್ಲಿ ಅನೇಕ ಏರುಪೇರುಗಳನ್ನುಂಟುಮಾಡಿದೆ. ವಿರಳತೆಗಳನ್ನು ಸತತವಾಗಿ ಮುಂದು

ವರೆಸಿಕೊಂಡು ಹೋಗುವುದರಲ್ಲಿ ಅತ್ಯಂತ ಬಲಾಢ್ಯರಾದ ಒಂದು ವರ್ಗದ ಜನರ ಜನಾಂಗಗಳನ್ನೆ ಕಪ್ಪು ಹಣ ಸೃಷ್ಟಿಸಿದೆ. ಇಷ್ಟೇ ಅಲ್ಲದೆ ಅರ್ಥವ್ಯವಸ್ಥೆಯು ಸೂಕ್ತವುಂದುವರಿಕೆಗೆ ಆಗತ್ಯವಾದ ಯಾವ ಸಮಗ್ರತತ್ವವನ್ನೂ ಕಾರ್ಯಾಚರಣೆಗೆ ತರದಂತೆ ಮಾಡುವ ಮತ್ತು ಕೇವಲ ಭಾಗಶಃ ತತ್ವಗಳನ್ನು ಆಚರಣೆಗೆ ತರುವ ಜನಾಂಗವೊಂದನ್ನು ಸಹ ಇದು ಸೃಷ್ಟಿಸಿದೆ. ಒಂದೇ ವಲಯದಲ್ಲಿ ಸಮಾನಾಂತರ ರೇಖೆಗಳ ರೀತಿಯ ಎರಡು ಮಾರುಕಟ್ಟೆಗಳನ್ನು ಇದು ಅಸ್ತಿತ್ವಕ್ಕೆ ತಂದಿದೆ. ಸಮಾನಾಂತರ ರೇಖೆಗಳಾದರೆ ಎಲ್ಲೂ ಪರಸ್ಪರ ಸಂಧಿಸುವುದಿಲ್ಲ. ಆದರೆ ಈ ಮಾರುಕಟ್ಟೆಗಳು ಹಾಗಲ್ಲ. ಇವು ಪರಸ್ಪರ ಸಂಧಿಸುವುದಷ್ಟೆ ಅಲ್ಲದೆ ಒಂದು ಮತ್ತೊಂದನ್ನು ಆಕ್ರಮಿಸುತ್ತಿರುತ್ತದೆ. ಯಾವುದು ಕಪ್ಪು ಮಾರುಕಟ್ಟೆ, ಯಾವುದು ನಿಜವಾದ ಮಾರುಕಟ್ಟೆ ಎನ್ನುವುದನ್ನು ತಿಳಿಯುವುದಕ್ಕೇ ಆಗುವುದಿಲ್ಲ. ಈ ವ್ಯವಸ್ಥೆ ಲಾಭಗಳು ಮತ್ತು ಇತರ ರೀತಿಯ ಮೇಲು ಸಂಪಾದನೆಗಳಿಗೆ ದಾರಿಮಾಡಿಕೊಡುತ್ತಿವೆ. ಈ ಸ್ವರೂಪದ ಆದಾಯಗಳು ಒಟ್ಟು ಉತ್ಪಾದನೆಗೆ ಯಾವ ಕಾಣಿಕೆಯನ್ನೂ ನೀಡುತ್ತಿಲ್ಲ.

## ನೀತಿಯ ಗುರಿಗಳು

ಸಾಮಾಜಿಕವಾಗಿ ಅಗತ್ಯವಿರುವ ಮಾರ್ಗಗಳಿಗೆ ರಾಷ್ಟ್ರದ ಸಂಪತ್ತು ಮರುನಿರ್ದೇಶಿತವಾಗುವ ವೃತ್ತಿಯಿಂದ, ಸರಕುಗಳನ್ನು ಕೊಳ್ಳುವ ಚೈತನ್ಯವು ಹೆಚ್ಚು ನ್ಯಾಯರೂಪದಲ್ಲಿ ಜನರ ನಡುವೆ ಹಂಚಿಕೆಯಾಗುವ ವೃತ್ತಿಯಿಂದ, ಅಪ್ರಾಮುಖ್ಯ ಮಾರ್ಗಗಳಿಂದ, ಪ್ರಮುಖವಾದ ದಿಕ್ಕುಗಳಿಗೆ ಶಕ್ತಿಯುತವಾದ ಹೂಡಿಕೆಗಳು ಪರಿವರ್ತಿತವಾಗುವ ವೃತ್ತಿಯಿಂದ ಹಣದುಬ್ಬರದ

ಮೇಲೆ ತಕ್ಷಣವೇ ಹತೋಟಿಯನ್ನಿಟ್ಟುಕೊಳ್ಳಬೇಕಾಗಿರುವುದು ಅತ್ಯಂತ ಜರೂರಾದ ಆವಶ್ಯಕತೆಯಾಗಿದೆ.

ತೆರಿಗೆ ನೀತಿಗಳಲ್ಲಿ ಅಡಗಿರುವ ಉತ್ತೇಜಕಗಳು ಮತ್ತು ಶಿಕ್ಷೆಗಳು ಅರ್ಥಪೂರ್ಣವಾಗುವುದಕ್ಕೆ, ಜನಸಾಮಾನ್ಯರು ಭವಿಷ್ಯಕ್ಕಾಗಿ ಮಾಡುವ ಉಳಿತಾಯಗಳಲ್ಲಿ ಅವರಿಗೆ ಧೈರ್ಯ ಮೂಡುವುದಕ್ಕೆ ರಾಜಕೀಯ ಲಂಚಕೋರತನವನ್ನು ತಪ್ಪಿಸುವುದಕ್ಕೆ ಮತ್ತು ಕೊನೆಯದಾಗಿ, ರಾಷ್ಟ್ರವು ಸಮಾಜವಾದದ ಕಡೆ ಹೊರಳಲು ಅಗತ್ಯವಿರುವ ನೈತಿಕ ಧೈರ್ಯವನ್ನು ಅವರಲ್ಲಿ ತುಂಬಲು ಹಣದುಬ್ಬರ ಹೆಚ್ಚದಂತೆ ನೋಡಿಕೊಳ್ಳುವುದು ಅತ್ಯಂತ ಆವಶ್ಯಕವಾಗಿದೆ.

## ಹಣದ ಸರಬರಾಜಿನ ಮೇಲೆ ಗರಿಷ್ಠ ಮಿತಿ

ಅರ್ಥವ್ಯವಸ್ಥೆಯ ಬ್ಯಾಂಕಿಂಗ್ ರಂಗದಲ್ಲಿನ ಬಿಕ್ಕಟ್ಟಿಗೆ ಕಾರಣ ವರ್ಷವೊಂದಕ್ಕೆ ಇಂತಿಷ್ಟೇ ದರದಲ್ಲಿ ಹಣ ನೀಡಿಕೆ ಹೆಚ್ಚಬೇಕೆಂಬ ಮಿತಿಯನ್ನು ಹೊಂದಿಲ್ಲದಿರುವುದು. ಅಲ್ಪಾವಧಿಯಲ್ಲಿ ಆವಶ್ಯಕ ಅನುಭೋಗ ವಸ್ತುಗಳ ಉತ್ಪಾದನೆಯಲ್ಲಿನ ಹೆಚ್ಚಳವನ್ನು ಲಕ್ಷ್ಯದಲ್ಲಿಟ್ಟುಕೊಂಡು ಇಂತಹ ಮಿತಿಯೊಂದನ್ನು ಗೊತ್ತುಮಾಡುವುದು ಬಹಳ ಅಗತ್ಯ. ನಮಗಿರುವ ಪರಿಸ್ಥಿತಿಯಲ್ಲಿ ಒಳ್ಳೆಯ ಹಾಗೂ ಕೆಟ್ಟ ವರ್ಷಗಳನ್ನು ಗಣನೆಗೆ ತೆಗೆದುಕೊಂಡಂತೆ ಈ ದರ 2% ರಿಂದ 4% ನಡುವೆ ಬೀಳುತ್ತದೆ. ಇದರ ಒಂದು ಅಭಿಪ್ರಾಯವೆಂದರೆ (a) ಮುಂದಿನ ಕೆಲವು ವರ್ಷಗಳಲ್ಲಿ, ಅನೇಕ ಆವಶ್ಯಕ ವಸ್ತುಗಳ ಸಿದ್ಧ ದಾಸ್ತಾನನ್ನು ಏರ್ಪಡಿಸಿಕೊಳ್ಳಬೇಕು. (b) ಉತ್ಪನ್ನ ಯಾವ ದರದಲ್ಲಿ ಹೆಚ್ಚುತ್ತಿದೆಯೋ ಅದೇ ದರದಲ್ಲಿ ಸರ್ಕಾರದ ಮೂಲಕ ನಡೆಯುತ್ತಿರುವ ವಿತರಣಾ ಸಂಸ್ಥೆಗಳಿಗೆ ಸರಕುಗಳು ಲಭ್ಯವಾಗುವ

ಸಾಧ್ಯತೆ ಇಲ್ಲ. (c) ರಾಷ್ಟ್ರದಲ್ಲಿ ಸುಪ್ತ ಹಣ ಬಹಳ ಪ್ರಮಾಣದಲ್ಲಿದೆ. ಅದನ್ನು, ಅನೇಕ ಆಕರ್ಷಣೆಗಳ ಮೂಲಕ ಜಾಗ್ರತೆಗೊಳಿಸಬೇಕು. ಈ ದಿಶೆಯಲ್ಲಿ ಹಣಕಾಸು ಮತ್ತು ಇತರ ಸಂಸ್ಥೆಗಳು ಕಾರ್ಯೋನ್ಮುಖವಾಗಬೇಕು. ಇದನ್ನು ಮನಸ್ಸಿನಲ್ಲಿಟ್ಟುಕೊಂಡು, ಪ್ರಸ್ತುತ ಬೆಲೆಗಳಿಗಿಂತ ಕಡಮೆ ಮಟ್ಟದ ಬೆಲೆಗಳಲ್ಲಿ, ಮೂಲಾವಶ್ಯಕ ವಸ್ತುಗಳ ಬೆಲೆಗಳನ್ನು ಸ್ಥಿರವಾಗಿಟ್ಟಿರಲು ಐದನೆಯ ಯೋಜನೆಯ ಅವಧಿಯಲ್ಲಿ ವರ್ಷಕ್ಕೊಂದಕ್ಕೆ ಹಣದ ಹೆಚ್ಚಳದ ದರವನ್ನು ಶೇ. ೩ರಷ್ಟು ಇಟ್ಟಿರಬೇಕು. ಈ ಬಗ್ಗೆ ಇರುವ ಮತ್ತೊಂದು ಅಭಿಪ್ರಾಯವೆಂದರೆ (a) ಒಂದು ಘಟಕ ಉತ್ಪನ್ನಕ್ಕೆ ಅಗತ್ಯವಿರುವ ಹಣದ ವಿತ್ತವ್ಯಯವನ್ನುಂಟುಮಾಡುವ ಶಕ್ತಿಗಳು ಒಂದು ಘಟಕ ಉತ್ಪನ್ನಕ್ಕೆ ಬೇಕಾದ ಶಕ್ತಿಗಳಿಗಿಂತ ಕಡಿಮೆ ಶಕ್ತಿಯುಳ್ಳದ್ದಾಗಿವೆ. ಇದರಿಂದ ಹಣೀಕರಣ ಮಾಡಲು ಅಗತ್ಯವಿರುವ ಆದಾಯ ಪರಿಚಲನಾ ವೇಗವು ಮಿತವಾಗಿದೆ. (b) ಭಾರತದಲ್ಲಿ ಉತ್ಪಾದನೆಯ ಬೆಳವಣಿಗೆಯು ಬಹಳವಾದ ವ್ಯತ್ಯಾಸಗಳನ್ನು ಅನುಭವಿಸುತ್ತಾ ನಡೆದಿರುವುದರಿಂದ ಇದು ಹಣದ ಬೆಳವಣಿಗೆಯ ದರಕ್ಕೆ ಹೆಚ್ಚಿನ, ಗರಿಷ್ಠ ಮಿತಿಯನ್ನು ಗೊತ್ತು ಮಾಡುವುದನ್ನು ಅಗತ್ಯವಾಗಿಸುತ್ತದೆ. (c) ದೊಡ್ಡ ಪ್ರಮಾಣದ ಸಾಲ ಬೆಳವಣಿಗೆ ದರದಿಂದ ಸಣ್ಣ ಪ್ರಮಾಣದ ಸಾಲ ಬೆಳವಣಿಗೆ ದರಕ್ಕೆ ಸುಗಮ ಪರಿವರ್ತನೆಯು, ದಿಢೀರನೆ ಹಣದ ಬೆಳವಣಿಗೆಯ ದರವನ್ನು ಕೆಳಗಿಳಿಸುವ ಕ್ರಮವನ್ನು ಜೀತನಾಗಿಸುತ್ತದೆ. ಈ ಕಾರಣದಿಂದ ಐದನೆ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ಹಣ [illegible]ಯನ್ನು ವರ್ಷಕ್ಕೊಂದಕ್ಕೆ ಶೇ. ೧೦ ಬೆಳವಣಿಗೆ ದರದಲ್ಲಿ ಇಟ್ಟಿರಬೇಕು. ಈ

ಬಗ್ಗೆ ಇರುವ 3ನೆ ಅಭಿಪ್ರಾಯವೆಂದರೆ— (a) ಸಾಮಾಜಿಕ ನ್ಯಾಯ ವೃಷ್ಟಿ, (b) ಮೌಲ್ಯ ಸಂಗ್ರಹದ ಉದ್ದೇಶಕ್ಕಾಗಿ ಹಣ ಬಳಕೆಯ ವ್ಯಾಪ್ತಿ ಮತ್ತು (c) ವಿತ್ತ ವಿಧಾನದ ಕ್ರಿಯೆಗಾಗಿ ಆದರ್ಶ ಕ್ರಮವೊಂದರ ಸೃಷ್ಟಿ, ಈ ಕಾರಣಗಳಿಗಾಗಿ ಹಣದ ಬೆಳವಣಿಗೆಯ ದರವನ್ನು ವರ್ಷವೊಂದಕ್ಕೆ ಶೇ. 2.5 ರ ಗರಿಷ್ಟ ಮಿತಿಯಲ್ಲಿಟ್ಟಿರಬೇಕು. ಈ ಮಿತಿಯು ನಮ್ಮ ದೇಶದ ವರ್ಷವೊಂದರ ಜನಸಂಖ್ಯಾ ಬೆಳವಣಿಗೆಯ ದರಕ್ಕೂ ಸಮನಾಗಿದೆ.

ನಾವು ಮೇಲಿನ ಎಲ್ಲ ಅಭಿಪ್ರಾಯಗಳ ಒಳಿತು ಕೆಡಕುಗಳನ್ನು ಪರಿಶೀಲಿಸಿದ್ದೇವೆ. ಪ್ರತಿಯೊಂದು ಸಲಹೆಗೂ ಕೆಲವು ಒಳ್ಳೆಯ ಅಂಶಗಳಿವೆ. ಒಟ್ಟಿನಲ್ಲಿ ಎಲ್ಲ ಸಾಧ್ಯತೆಗಳನ್ನು ಪರಿಶೀಲಿಸಿ, 5ನೆಯ ಪಂಚವಾರ್ಷಿಕ ಅವಧಿಯ ಯೋಜನೆಯಲ್ಲಿ ವರ್ಷವೊಂದಕ್ಕೆ ಶೇ. 5ರ ಹಣ ಬೆಳವಣಿಗೆಯ ತಾತ್ಕಾಲಿಕ ಗರಿಷ್ಠ ದರವನ್ನು ನಾವು ಸೂಚಿಸುತ್ತೇವೆ. ಈ ಗರಿಷ್ಠ ಮಿತಿಯನ್ನಿಟ್ಟುಕೊಂಡು ಮತ್ತು ಉತ್ತೇಜನಗಳಿಂದ ಪ್ರಭಾವಿತವಾಗಬಹುದಾದ ಬ್ಯಾಂಕುಗಳಲ್ಲಿನ ನಿಶ್ಚಿತಾವಧಿ, ಠೇವಣಿ ಬೆಳವಣಿಗೆಯ ದರವನ್ನು ಅಂದಾಜಿನ ಪ್ರಕಾರ ಗೊತ್ತುಮಾಡಿಕೊಂಡು ಸರ್ಕಾರ ಮತ್ತು ವಾಣಿಜ್ಯ ರಂಗಗಳ ಅಗತ್ಯತೆಗಳಿಗೆ ತಕ್ಕಂತೆ ಸಾಲ ವಿಸ್ತರಣೆಗಳನ್ನು ಗೊತ್ತುಮಾಡಿಕೊಳ್ಳುವುದಕ್ಕೆ ವಿತ್ತ ಹಾಗೂ ಹಣಕಾಸು ಅಧಿಕಾರಿಗಳು ಜವಾಬ್ದಾರಿ ವಹಿಸಬೇಕು. ಆವಶ್ಯಕ ವಸ್ತುಗಳ ವಾರ್ಷಿಕ ಉತ್ಪಾದನೆಯನ್ನು ಕಾರ್ಖಾನೆಗಳು ವರ್ಷವೊಂದಕ್ಕೆ ಹೆಚ್ಚಿಸಿಕೊಳ್ಳುವ ದರವನ್ನು ಅನುಸರಿಸಿ [ ಹಿಂದಿನ 3 ವರ್ಷಗಳ ಉತ್ಪನ್ನ ಸರಾಸರಿಯನ್ನು ಗಮನಿಸಿ ], ಅವು ಎಷ್ಟು ಹೆಚ್ಚಿನ ಪ್ರಮಾಣದಲ್ಲಿ ಸರ್ಕಾರಿ

ಹಂಚಿಕೆಯ ವ್ಯವಸ್ಥೆಗೆ ಹೆಚ್ಚಿನ ಪ್ರಮಾಣದ ಸರಕುಗಳನ್ನು ದೊರಕಿಸಿಕೊಡಲು ಶಕ್ಯವಾಗುತ್ತದೆ ಎಂಬುದನ್ನು ಗಮನಿಸಿ ಮತ್ತು ವರ್ಷದಿಂದ ವರ್ಷಕ್ಕೆ ಈ ಸರಕುಗಳ ದಾಸ್ತಾನಿನ ಬೆಳವಣಿಗೆಯನ್ನು ಗಮನಿಸಿ ಹಣನೀಡಿಕೆಯ ದರದ ಗರಿಷ್ಠ ಮಿತಿಯನ್ನು ಮೇಲಕ್ಕೇರಿಸಬಹುದು. ಹಾಗೆಯೇ ಅಂತರ ರಾಷ್ಟ್ರೀಯ ಅಂಶಗಳಿಂದಾಗಿ ಉತ್ಪಾದನ ವೆಚ್ಚ ಹೆಚ್ಚಾಗುವ ಸಂದರ್ಭದಲ್ಲೂ ಸಹ ಗರಿಷ್ಠ ಮಿತಿಯನ್ನು ಹೆಚ್ಚಿಸಬಹುದು.

## ಐದನೆಯ ಪಂಚವಾರ್ಷಿಕ ಯೋಜನೆಯಲ್ಲಿ ಹಣದುಬ್ಬರದ ಅಂತಃಶಕ್ತಿ

5ನೆಯ ಪಂಚವಾರ್ಷಿಕ ಯೋಜನೆಯಲ್ಲಿ ಹಣದುಬ್ಬರ ರಹಿತವಾದ ಅಭಿವೃದ್ಧಿಯನ್ನು ಒಪ್ಪಿಕೊಳ್ಳಲಾಗಿದೆ. ಈ ಧ್ಯೇಯವನ್ನು ಖಾಸಗೀ ಹಾಗೂ ಸರ್ಕಾರೀ ರಂಗಗಳ ಹಣ ಕಾಸು ಅಗತ್ಯಗಳನ್ನು ಪ್ರತಿವರ್ಷವೂ ಬ್ಯಾಂಕೇತರ ಮೂಲ ಗಳ ಉಳಿತಾಯಗಳಿಂದ ದೊರಕಿಸಿಕೊಟ್ಟರೆ ಮಾತ್ರ ಸಾಧ್ಯ ವಾಗುತ್ತದೆ. ಪಂಚವಾರ್ಷಿಕ ಯೋಜನೆಯ ಕರಡಿನ ಪ್ರಕಾರ ಸರ್ಕಾರಿ ರಂಗಕ್ಕೆ ಬ್ಯಾಂಕು ಉದ್ದರಿಯ ಹೆಚ್ಚಳವು ಯೋಜನೆಯ ಅವಧಿಯಲ್ಲಿ ಸುಮಾರು 4,574 ಕೋಟಿ ರೂಪಾಯಿಗಳಾಗಿದೆ. [1184 ಕೋಟಿರೂ. ಗಳನ್ನು ರಿಸರ್ವ್ ಬ್ಯಾಂಕ್‌ನಿಂದಲೂ, ಮತ್ತು 3,390 ಕೋಟಿ ರೂ.ಗಳನ್ನು ವಾಣಿಜ್ಯ ಬ್ಯಾಂಕುಗಳಿಂದಲೂ ಪಡೆಯಬೇಕೆಂದಾಗಿದೆ.] ಕೈಗಾರಿಕೆ ಮತ್ತು ವಾಣಿಜ್ಯ ರಂಗಕ್ಕೆ ಬ್ಯಾಂಕು ಸಾಲದ ಮೊತ್ತವು 5800 ಕೋಟಿ ರೂ. ಗಳಾಗಿವೆ. [1500 ಕೋಟಿ ರೂ. ಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಿಗಳ ಉದ್ಯಮ ಗಳಿಗೆ 812 ಕೋಟಿ ರೂ.ಗಳನ್ನು ಅವುಗಳ ಮಾರುಕಟ್ಟೆ

ಸಾಲಕ್ಕಾಗಿ, 2281 ಕೋಟಿ ರೂಗಳನ್ನು ಗೃಹೋಪ ಯೋಗಿಗಳಿಗೆ ಮತ್ತು 1215 ಕೋಟಿ ರೂಗಳನ್ನು ಖಾಸಗಿ ಹಣಕಾಸೇತರ ಕಾರ್ಪೊರೇಟ್‌ಗಳಿಗೆ ಮತ್ತು ಸಾಲೇತರ ಸಹಕಾರಿ ರಂಗಕ್ಕೆ ಒದಗಿಸುವುದಕ್ಕೆಂದು ಹೇಳಲಾಗಿದೆ.] ಆದ್ದರಿಂದ ಬ್ಯಾಂಕು ಉದ್ಧರಿಯ ಒಟ್ಟು ಹೆಚ್ಚಳದ ಗುರಿ 5ನೆಯ ಯೋಜನೆಯಲ್ಲಿ 10,400 ಕೋಟಿ. ರೂ. ಗಳಾಗಿವೆ. ಇದು 1973–74 ರಲ್ಲಿ ಕೊನೆಯ ವೇಳೆಯ ಬ್ಯಾಂಕು ಉದ್ಧರಿಯ ಅಂದಾಜು ಮೊತ್ತಕ್ಕಿಂತ ಶೇ. 60ರಷ್ಟು ಹೆಚ್ಚಾಗಿದೆ. ಯೋಜನೆಯ ಈ ಅಂದಾಜುಗಳು 1972–73ರ ಬೆಲೆಗಳಲ್ಲಿ ಮಾಡಿರುವ ಲೆಕ್ಕಾಚಾರಗಳಾಗಿವೆ. ನಾವು 1973–74ರ ಬೆಲೆಗಳಲ್ಲಿ ಬ್ಯಾಂಕು ಉದ್ಧರಿಯ ಅಗತ್ಯತೆಗಳನ್ನು ಮರುಅಂದಾಜು ಮಾಡಿದರೆ ಅದು 12,000 ಕೋಟಿ ರೂ. ಗಳಿಗಿಂತಲೂ ಹೆಚ್ಚಾಗುತ್ತದೆ. ಬ್ಯಾಂಕುಗಳ ನಿವ್ವಳ ಸಮಯ ಋಣಿಕೆಯಲ್ಲಿ 4,800 ಕೋಟಿ ರೂ. ಗಳಷ್ಟು ಹೆಚ್ಚಾಗುತ್ತದೆ [ಬ್ಯಾಂಕು ಉದ್ಧರಿಯ ಶೇ. 40 ರಷ್ಟು] ಎಂದಿಟ್ಟುಕೊಂಡರೂ ಹಣ ನೀಡಿಕೆಯ ಹೆಚ್ಚಳವು 7,200 ಕೋಟಿ ರೂ.ಗಳಿಗಿಂತಲೂ ಹೆಚ್ಚಾಗುತ್ತದೆ. ಅಂದರೆ ಇದು 1973–74ರ ಕೊನೆಯ ವೇಳೆಯಲ್ಲಿ ನಿರೀಕ್ಷಿಸಲಾಗುವ ಮಟ್ಟಕ್ಕಿಂತ ಹತ್ತಿರ–ಹತ್ತಿರ ಶೇ. 65ರಷ್ಟು ಹೆಚ್ಚಾಗಿರುತ್ತದೆ. 5ನೆಯ ಯೋಜನೆಯ ಧ್ಯೇಯಗಳನ್ನು ಪೂರೈಸುವುದು ಸಾಧ್ಯವಾದರೆ ಅನುಭೋಗ ಆವಶ್ಯಕತೆಗಳ ನೀಡಿಕೆಯ ಹೆಚ್ಚಳವು, 1973–74ರ ಕೊನೆಯ ವೇಳೆಯ ಅಂದಾಜುಮಟ್ಟಕ್ಕಿಂತ ಶೇ. 15ರಿಂದ 20ರಷ್ಟು ಮಾತ್ರ ಹೆಚ್ಚಾಗುತ್ತದೆ. ಈ ಆಧಾರದ ಮೇಲೆ ನಾವು ಒಂದು

ತೀರ್ಮಾನಕ್ಕೆ ಬರಬಹುದು. ಆದಾಯ —ಪರಿಚಲನಾ— ವೇಗವು ಬದಲಾಗದೆ ಇದ್ದರೆ, ಕೂಲಿ ಸರಕುಗಳಿಂದ ಬೇಡಿಕೆಯು ಗಣನೀಯ ಪ್ರಮಾಣದಲ್ಲಿ ಇತರ ಸರಕುಗಳಿಗೆ ಪಲ್ಲಟಗೊಳ್ಳದಿದ್ದರೆ, 1973-74ರ ಕೊನೆಯ ವೇಳೆಗೆ ಹೋಲಿಸಿದಂತೆ ಆವಶ್ಯಕ ವಸ್ತುಗಳ ಬೆಲೆಗಳು ಶೇ. 40ರಷ್ಟು ಹೆಚ್ಚಾಗುತ್ತವೆ. ಇದು ಯೋಜನೆಯ ಉದ್ದೇಶವಾದ ಉಬ್ಬರರಹಿತ ಹಣಕಾಸು ಒದಗಿಸುವಿಕೆಯನ್ನು ಚೂರು ಚೂರು ಮಾಡುವುದಷ್ಟೆ ಅಲ್ಲದೆ ರಾಷ್ಟ್ರದಲ್ಲಿ ಈಗಾಗಲೆ ಇರುವ ಪ್ರಕ್ಷುಬ್ಧತೆಯನ್ನು ಇನ್ನೂ ತೀವ್ರಗೊಳಿಸುತ್ತದೆ.

ಕೊರತೆ ಹಣ ಒದಗಿಸುವಿಕೆಯನ್ನು 5ನೆಯ ಯೋಜನೆಯ ಮೊದಲೆರಡು ವರ್ಷಗಳಲ್ಲಿ ತಪ್ಪಿಸಬೇಕು ಮತ್ತು ಸರ್ಕಾರಕ್ಕೆ ಈ ಅವಧಿಯಲ್ಲಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಬಿಲ್ ಸಾಲವನ್ನು 1,000 ಕೋಟಿ ರೂಗಳಿಗೆ ಮಿತಗೊಳಿಸಬೇಕು ಎಂದು ಕರಡಿನಲ್ಲಿ ವ್ಯಕ್ತಪಡಿಸಲಾಗಿರುವ ಅಂಶವನ್ನು ನಾವು ಸ್ವಾಗತಿಸುತ್ತೇವೆ. ಆದರೆ ಕರಡಿನಲ್ಲಿ ವಾಣಿಜ್ಯ ಬ್ಯಾಂಕುಗಳಿಂದ ಸರ್ಕಾರವು 3,390 ಕೋಟಿ ರೂ.ಗಳನ್ನು ಸಾಲವಾಗಿ ಪಡೆಯಬೇಕು ಎಂದು ಶಿಫಾರಸು ಮಾಡಲಾಗಿದೆ. [ಇದು ವಾಣಿಜ್ಯ ಬ್ಯಾಂಕುಗಳಿಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಪಡೆಯುವ 1500 ಕೋಟಿ ರೂ.ಗಳು ಮತ್ತು ಈ ಸಂಸ್ಥೆಗಳು ಪ್ರತ್ಯೇಕವಾಗಿ ಪಡೆಯುವ 812 ಕೋಟಿ ರೂ.ಗಳ ಮಾರುಕಟ್ಟೆ ಸಾಲಗಳಲ್ಲದೆ ಮೇಲಿನ 3,390 ಕೋಟಿ ರೂ ಗಳ ಸಾಲಕ್ಕೆ ಶಿಫಾರಸು ಮಾಡಲಾಗಿದೆ]. ಈ ಅಂಶದ ಬಗ್ಗೆ ನಾವು ತೀವ್ರವಾಗಿ ವಿಷಾದಿಸುತ್ತೇವೆ. ಜನರ ನಗದು ಹಣ ಹೊಂದಿರುವಿಕೆ ಮತ್ತು ಬ್ಯಾಂಕು ಠೇವಣಿಗಳ ನಡುವಣ ದೃಢ ಅನುಪಾತ

ವನ್ನು ಇಟ್ಟುಕೊಂಡಲ್ಲಿ ಮೇಲೆ ಶಿಫಾರಸು ಮಾಡಿರುವಂತಹ ಅಂಶವು ವಾಣಿಜ್ಯ ಬ್ಯಾಂಕುಗಳಿಂದ ಸರ್ಕಾರವು ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಸಾಲವನ್ನು ಪಡೆಯುವ ಪರಿಸ್ಥಿತಿಯು, ಜನತೆಯಲ್ಲಿ ಹಣವು ಬಹಳ ಹೆಚ್ಚಾಗಿ ವಿಸ್ತಾರವಾಗುವುದಕ್ಕೆ ದಾರಿಮಾಡಿಕೊಡುತ್ತದೆ. ಕರೆನ್ಸಿ ಹಾಗೂ ಸಾಲದ ನಡುವಣ ಅನುಪಾತವು ಶೇ. 35ರಂತೆಯೆ ಮುಂದುವರೆದರೆ 12,000 ಕೋಟಿ ರೂ.ಗಳ ಬ್ಯಾಂಕು ಸಾಲ ವಿಸ್ತರಣೆಗೆ, ಕರೆನ್ಸಿಯ ಹೊರ ಪ್ರವಹಿಸುವಿಕೆಯು 4,200 ಕೋಟಿ ರೂ.ಗಳಾಗಬೇಕಾಗುತ್ತದೆ. ಇದನ್ನು ಗಣನೆಗೆ ತೆಗೆದುಕೊಂಡರೆ 5ನೆ ಯೋಜನೆಯ ಅವಧಿಯಲ್ಲಿ ಹಣದ ಹೆಚ್ಚಳವು 10,000 ಕೋಟಿ ರೂ.ಗಳಾಗಬೇಕು. ಈ ಆಧಾರದ ಮೇಲೆ ಯೋಜನೆಯ ಅವಧಿಯಲ್ಲಿ ಹಣದ ನೀಡಿಕೆ ದ್ವಿಗುಣಗೊಂಡು ಬೆಲೆಯ ಮಟ್ಟವು ಶೇ. 65ರಷ್ಟು ಹೆಚ್ಚಾಗಲು ಮಾರ್ಗಮಾಡಿಕೊಡುತ್ತದೆ. ಆದ್ದರಿಂದ ಬೆಲೆ ಧೃಢತೆಯನ್ನು ಕಾಪಾಡಿಕೊಳ್ಳಲು ವಾಣಿಜ್ಯ ಬ್ಯಾಂಕುಗಳಿಂದ ಸರ್ಕಾರ ಪಡೆಯಬೇಕೆಂದಿರುವ ಸಾಲದ ಮೊತ್ತವನ್ನು ಗಣನೀಯ ಪ್ರಮಾಣದಲ್ಲಿ ಕಡಮೆ ಮಾಡಲೇಬೇಕು.

ಸರ್ಕಾರೀ ರಂಗದ ಉದ್ಯಮಗಳಲ್ಲಿ ಅಧಿಕ ಉತ್ಪನ್ನವು ನಡೆಯುತ್ತದೆ. ಮತ್ತು ಇದರಿಂದ ಆ ಉದ್ಯಮಗಳ ಅಗತ್ಯಗಳನ್ನು ಪೂರೈಸುವುದಕ್ಕೋಸ್ಕರ ಭಾಗಶಃ ಹಣವು ಅವುಗಳಿಂದಲೇ ಲಭ್ಯವಾಗುತ್ತದೆ ಎಂಬ ಒಂದು ಆಸೆಯನ್ನು ಐದನೆಯ ಯೋಜನೆಯ ಕರಡು ವ್ಯಕ್ತಪಡಿಸುತ್ತದೆ. ಹೀಗಾಗಬೇಕಾದಲ್ಲಿ ಅವುಗಳ ಕ್ರಿಯಾ ವಿಧಾನದಲ್ಲಿ ದೊಡ್ಡ ಪ್ರಮಾಣದ ಮೂಲಭೂತ ಬದಲಾವಣೆಗಳು ಅವಶ್ಯಕ ಎಂಬ ಮಾತನ್ನು

ಗಮನಿಸಬೇಕು. ಈ ಉದ್ಯಮಗಳಲ್ಲಿನ ದಕ್ಷತೆಯನ್ನು ಹೆಚ್ಚು ಮಾಡಿದ್ದಲ್ಲಿ ವಾಸ್ತವವಾಗಿ ಅವು ಹಣಕಾಸು ವ್ಯವಸ್ಥೆಗೆ ಒಂದು ದೊಡ್ಡ ಹೊರೆಯಾಗುತ್ತವೆ. ಇವುಗಳ ಕ್ರಿಯಾತ್ಮಕ ದಕ್ಷತೆಯನ್ನು ಹೆಚ್ಚುಮಾಡುವುದು ಕೆಲವು ಮಾರ್ಗಗಳಿಂದ ಸಾಧ್ಯ. 5ನೆಯ ಯೋಜನೆಯಲ್ಲಿ ಗೊತ್ತುಮಾಡಿರುವ ಈ ಸಂಸ್ಥೆಗಳ ಉಳಿತಾಯ ಉದ್ದೇಶಗಳಿಗನುಗುಣವಾಗಿ ಪ್ರತಿಯೊಂದು ಉದ್ಯಮಕ್ಕೂ ಯೋಗ್ಯಪ್ರತಿಫಲ ಮಾನದಂಡವನ್ನು ಗೊತ್ತು ಮಾಡಬೇಕು. ಇದನ್ನು ಸೂಕ್ತವಾದ ದಾಸ್ತಾನು ಮರು ಹೊಂದಾಣಿಕೆಗಳ ಮೂಲಕ ಮತ್ತು ಈ ಪ್ರತಿಫಲವನ್ನು ಉಂಟು ಮಾಡುವ ಜವಾಬ್ದಾರಿಯನ್ನು ಉದ್ಯಮದಲ್ಲಿನ ಅತ್ಯಂತ ದೊಡ್ಡ ಸ್ಥಾನದಲ್ಲಿರುವ ವ್ಯಕ್ತಿಯ ಜವಾಬ್ದಾರಿಯನ್ನಾಗಿ ಮಾಡುವುದರ ಮೂಲಕ ಮಾಡಬಹುದು. ಈ ಉನ್ನತಾಧಿಕಾರಿಯ ಅಧಿಕಾರವಧಿಯನ್ನು ಒಂದು ಕನಿಷ್ಠ ಅವಧಿಯವರೆಗೆ ಮಾತ್ರ ಇಟ್ಟಿರಬೇಕು. ಉದ್ಯಮಗಳ ಮೇಲೆ ಮಂತ್ರಿಗಳ ಹಾಗೂ ಪಾರ್ಲಿಮೆಂಟಿನ ಮಧ್ಯ ಪ್ರವೇಶಿಸುವಿಕೆಯು ಸಾಧ್ಯವಾದಷ್ಟು ಕಡಮೆಯಿರಬೇಕು. ಪ್ರತಿಫಲದ ಗುರಿಗಳನ್ನು ಮುಟ್ಟಿದಲ್ಲಿ ಉದ್ಯಮದ ಕಾರ್ಮಿಕರಿಗೆ ಸ್ವಲ್ಪ ಉತ್ತೇಜಕಗಳು ದೊರೆಯುವಂತಿರಬೇಕು. ಹಾಗೆಯೆ ಉತ್ಪಾದನೆಯ ಗುರಿಗಳನ್ನು ಮುಟ್ಟದಿದ್ದರೆ ಅವರ ಸಂಬಳ ಸಾರಿಗೆಗಳಲ್ಲಿ ನಿರುತ್ತೇಜಕ ಅಂಶಗಳನ್ನು ತರುವ ಸಾಧ್ಯತೆಯಿರಬೇಕು.

1973–74ರ ಬೆಲೆಗಳಲ್ಲಿ, ಐದನೇ ಯೋಜನೆಯ ಅವಧಿಯಲ್ಲಿ ಹಣವಿಸ್ತರಣೆಯ ಸಾಧ್ಯತೆಗಳನ್ನು ಸುಮಾರಾಗಿ 2,800 ಕೋಟಿ ರೂಗಳಿಂದ 3,000 ಕೋಟಿ ರೂಗಳಲ್ಲಿಟ್ಟಿರಲು, ಮತ್ತು ಅರ್ಥವ್ಯವಸ್ಥೆಯಲ್ಲಿ ಆಲೋಚಿಸಲಾಗಿರುವ

ನೈಜ ಹೂಡಿಕೆಯ ಹೆಚ್ಚಳವನ್ನು ತರಲು, ಹಣದುಬ್ಬರೇತರ ಉಳಿತಾಯಗಳನ್ನು ಸಾಧ್ಯವಿದ್ದಷ್ಟು ರೂಢಿಸುವುದು ಅತ್ಯಗತ್ಯ. ಸಾರ್ವಜನಿಕರಿಂದ ನಿಶ್ಚಿತಾವಧಿ ಠೇವಣಿಗಳನ್ನು ಗರಿಷ್ಠ ಮಟ್ಟದವರೆಗೆ ರೂಢಿಸಿಕೊಳ್ಳಲಾಗುತ್ತದೆ ಎಂದು ಭಾವಿಸಿದರೂ, ಕೈಗಾರಿಕೆ ಮತ್ತು ವಾಣಿಜ್ಯ ರಂಗಗಳಿಗೆ ಬ್ಯಾಂಕು ಸಾಲದ ಇಳಿತಾಯ ಆವಶ್ಯಕವಾಗೇ ಆಗುತ್ತದೆ. ಮೊದಲನೆಯ, ಎರಡನೆಯ ಮತ್ತು ಮೂರನೇ ಯೋಜನೆಗಳ ಆರಂಭದ ಪರಿಸ್ಥಿತಿಗಳಿಗೆ ಹೋಲಿಸಿದಂತೆ, ದಾಸ್ತಾನುಗಳ ಮೇಲೆ ಬ್ಯಾಂಕುಗಳು ಒದಗಿಸಿರುವ ಸಾಲದ ಶೇಕಡಾಂಶ ಗಣನೀಯ ಪ್ರಮಾಣದಲ್ಲಿ ವೃದ್ಧಿಗೊಂಡಿದೆ. ಸರ್ಕಾರಿ ವಾಣಿಜ್ಯ ಕಾರ್ಪೋರೇಷನ್‌ಗಳನ್ನು ಸ್ಥಾಪಿಸಿದುದರ ಉದ್ದೇಶ ಇಂತಹ ಶೇಕಡಾಂಶವನ್ನು ಕಡಮೆ ಮಾಡುವುದಾದರೂ ವಾಸ್ತವವಾಗಿ ಹೀಗಾಗಿಲ್ಲ. 25 ಲಕ್ಷರೂಗೂ ಹೆಚ್ಚಿನ ಸಾಲಗಳ ಸಂಖ್ಯೆ, ಸಂಖ್ಯೆಯ ದೃಷ್ಟಿಯಿಂದ ಅಷ್ಟು ಹೆಚ್ಚಿಲ್ಲದಿದ್ದರೂ, ಕೈಗಾರಿಕೆಗೆ ಒಟ್ಟು ಸಾಲದ ಹಿಸ್ಸೆಯಲ್ಲಿ ಬಹು ಹೆಚ್ಚಿನ ಭಾಗದ್ದಾಗಿದೆ. ಬೆಲೆ ಹೆಚ್ಚಳ ನಿರೀಕ್ಷಣೆಗಳು ಸತತವಾಗಿರುವ ಒಂದು ಪರಿಸ್ಥಿತಿಯಲ್ಲಿ, ನೈಜ ಉತ್ಪನ್ನದರವು ಕಡಮೆಯಿದ್ದರೂ, ಬೇರೆ ಕಡೆಗಳಿಗಿಂತ ಬ್ಯಾಂಕು ಸಾಲದ ಬಡ್ಡಿದರಗಳು ಕಡಮೆಯಿದ್ದರೆ, ಮತ್ತು ದಾಸ್ತಾನುಗಳನ್ನು ಇಟ್ಟುಕೊಂಡು ಹೋಗುವುದರಿಂದ ಬರಬಹುದಾದ ಲಾಭದರಗಳಿಗಿಂತ ಬಡ್ಡಿದರವು ಕಡಮೆಯಿದ್ದರೆ ದಾಸ್ತಾನುಗಳನ್ನು ಇಟ್ಟುಕೊಳ್ಳಲು ಬೇಡವಾಗುವ ಬ್ಯಾಂಕು ಸಾಲವು ಹೆಚ್ಚಾಗಿಯೇ ಇರುತ್ತದೆ. ಉತ್ಪಾದನೆಯ ಪ್ರವಾಹವನ್ನು ಮುಂದುವರಿಸಿಕೊಂಡು ಹೋಗುವುದಕ್ಕಾಗಿಯೇ ದಾಸ್ತಾನನ್ನು ಇಟ್ಟುಕೊಂಡಿರಲಾಗುತ್ತದೆ ಎಂದು ನಾವು ಹೇಳು

ವಂತಿಲ್ಲ. ಪ್ರತಿಯೊಂದು ದಾಸ್ತಾನಿನ ವಿಷಯವನ್ನು ಪರಿಶೀಲಿಸಿದಾಗ ಮಾತ್ರ ಯಾವುದು ಹಿತ ಉದ್ದೇಶದ ದಾಸ್ತಾನು, ಯಾವುದು ಅಹಿತ ಉದ್ದೇಶದ ದಾಸ್ತಾನು ಎಂಬುದು ವ್ಯಕ್ತವಾಗುತ್ತದೆ.

## ಸಾಲ ಯೋಜನೆ

ಕೈಗಾರಿಕೆಗಳು ಬ್ಯಾಂಕು ಸಾಲದ ಮೇಲೆ ಹೆಚ್ಚಾಗಿ ಅವಲಂಬಿಸುವುದನ್ನು ಸಾಕಷ್ಟು ಪ್ರಮಾಣದಲ್ಲಿ ಕಡಮೆಮಾಡಲು ಕ್ರಮಗಳನ್ನು ತೆಗೆದುಕೊಳ್ಳುವುದು ಬಹಳ ಅಗತ್ಯ. ಇದನ್ನು ಸಾಧಿಸಲು ಕೆಲವೊಂದು ಮಾರ್ಗದರ್ಶಿಗಳನ್ನು ರೂಪಿಸಬೇಕಾಗುತ್ತದೆ. ರಿಸರ್ವ್ ಬ್ಯಾಂಕ್ ಸಣ್ಣ ಘಟಕಗಳ ಮಟ್ಟದಲ್ಲಿ ಹಣದುಬ್ಬರ ರಹಿತ ಹಣಒದಗಿಸುವಿಕೆಯ ಪರ್ಯಾಯ ಮಾರ್ಗಗಳನ್ನು ಸೂಚಿಸಬೇಕು. ಬ್ಯಾಂಕು ಸಾಲಗಳ ಮೂಲಕ ಸ್ಥಿರ ಹೂಡಿಕೆಗಳಿಗೆ ಹಣ ಒದಗಿಸುವ ರೂಢಿಯನ್ನು ತಪ್ಪಿಸಬೇಕು. ಈ ರೀತಿಯ ಪರಿವರ್ತನೆಯ ಹಾದಿ ಕಠಿಣವಾದದ್ದು ಎಂಬುದು ದಿಟ. ಆದರೆ, ಎಚ್ಚರಿಕೆಯಿಂದ ಯೋಜನೆ ಮಾಡಿ ಹಂತ-ಹಂತವಾಗಿ ಕಾರ್ಖಾನೆಗಳು ಬ್ಯಾಂಕು ಸಾಲಗಳ ಮೇಲೆ ಅವಲಂಬಿತವಾಗುವುದನ್ನು ಕಡಮೆ ಮಾಡುವ ಕ್ರಮವು ನಿರೀಕ್ಷಿತ ಮಟ್ಟದ ಉತ್ಪಾದನ ಹೆಚ್ಚಳವನ್ನು ಕಾಪಾಡಿಕೊಳ್ಳಲು ಸಹಾಯಕವಾಗುತ್ತದೆ. ಮಧ್ಯಮ ಹಾಗೂ ದೊಡ್ಡ ಪ್ರಮಾಣದ ಕಾರ್ಖಾನೆಗಳ ಹಣದ ಅಗತ್ಯವನ್ನು ಕೆಳಗಿನ ಮಾರ್ಗಗಳಿಂದ ಪೂರೈಸಬೇಕು (a) ಆಂತರಿಕ ಮಿತವ್ಯಯಗಳು,(d) ಅವಲಂಬೇತರ ವೆಚ್ಚಗಳಲ್ಲಿನ ಕಡಿತ (c) ಅವಲಂಬಿತ ವೆಚ್ಚಗಳ ನಿರ್ದೇಶಕಗಳ ಇಳಿತಾಯ (b) ಹೆಚ್ಚು ಉತ್ತಮ ಕಾಯ್ದಿಡುವ ಕ್ರಮದಿಂದ ಕೈಗಾರಿಕಾ ಯಂತ್ರಗಳ

ಜೀವನಾವಧಿಯ ವಿಸ್ತರಣೆ (೮) ಮಾರುಕಟ್ಟೆ ಮೂಲಗಳನ್ನು ಬಳಸಿ ಮತ್ತು ಕಾರ್ಮಿಕರು ಹಾಗೂ ಸಂಬಳದಾರರ ಉಳಿತಾಯ ಪ್ರವೃತ್ತಿಗಳನ್ನು ವೃದ್ಧಿಸುವುದರ ಮೂಲಕ ಹಣವನ್ನು ಒದಗಿಸುವಿಕೆ ಮತ್ತು (೯) ಲಾಭಗಳಲ್ಲಿ ಹೆಚ್ಚಿನ ಭಾಗವನ್ನು ಕಾರ್ಖಾನೆಗಳಲ್ಲಿ ಉಳಿಸಿಕೊಳ್ಳುವುದು.

ಮೂಲಭೂತ ಸರಕುಗಳ ಉತ್ಪಾದನೆಯನ್ನು ಸಾಧ್ಯವಾದಷ್ಟು ವೇಗವಾಗಿ ಹೆಚ್ಚಿಸಲೇಬೇಕೆಂಬ ಭಾವನೆಯನ್ನಿಟ್ಟುಕೊಂಡರೆ, ಸಾಲಯೋಜನೆಯ ಮೊದಲನೆಯ ಗುರಿ, ಇಡೀ ರಾಷ್ಟ್ರ ಮಟ್ಟದಲ್ಲಿ ಸರಕುಗಳ ಪ್ರವಾಹವು ಗರಿಷ್ಠ ಮಟ್ಟದಲ್ಲಿರುವಂತೆ ನೋಡಿಕೊಳ್ಳುವ ಹಾಗೆ ದಾಸ್ತಾನಿನ ಮೇಲಿನ ನಿಯಂತ್ರಣವನ್ನು ಮರುಹಂಚಿಕೆ ಮಾಡುವುದಾಗಿರುತ್ತದೆ. ಸಾಲಗಳ ಅರ್ಥವೇ ದಾಸ್ತಾನಿನ ಮೇಲೆ ನಿಯಂತ್ರಣವನ್ನು ಹೊಂದಿರುವುದಾಗಿದೆ. ಆದ್ದರಿಂದ ಪ್ರತಿಯೊಂದು ಅಲ್ಪಾವಧಿಯಲ್ಲೂ ಸಾಮಾಜಿಕ ಪ್ರಾಧಾನ್ಯತೆಗಳ ಅಗತ್ಯಗಳನ್ನು ಪೂರೈಸುವುದಕ್ಕೆ ವಿವಿಧ ಕೈಗಾರಿಕೆಗಳು ಹೊಂದಿರುವ ಅಂತಃಶಕ್ತಿಗಳು ಮತ್ತು ಪ್ರಾರಂಭಿಕ ಅನುಕೂಲಗಳಿಗನುಗುಣವಾಗಿ ಸಾಲವನ್ನು ಮರುಹಂಚಿಕೆ ಮಾಡಬೇಕಾಗುತ್ತದೆ. ಸಾಲ ಯೋಜನೆಯ ಎರಡನೆಯ ಉದ್ದೇಶವೆಂದರೆ, ದೊಡ್ಡ ಕಾರ್ಖಾನೆಗಳಿಗೆ ಹೋಲಿಸಿದಂತೆ ಸಣ್ಣ ಕಾರ್ಖಾನೆಗಳಿಗೆ ಸಾಲವನ್ನು ಪಡೆಯಲು ಇರುವ ಕಠಿಣ ಮಾರ್ಗಗಳನ್ನು ಹೋಗಲಾಡಿಸಿ, ಅವುಗಳು ಸಾಲ ಪಡೆಯುವ ಮಾರ್ಗವನ್ನು ಸುಗಮಗೊಳಿಸುವುದು. ಈ ಯೋಜನೆಯ ಮೂರನೆಯ ಗುರಿ, ಅಲ್ಪಾವಧಿ ಸಾಲವನ್ನು ದೀರ್ಘಾವಧಿ ಹೂಡಿಕೆಗಳಿಗೆ ಬಳಕೆಯಾಗದಂತೆ ತಡೆಗಟ್ಟುವುದು. ಇದರ ಅರ್ಥ ಹೆಚ್ಚಿನ ಪ್ರಯತ್ನಗಳಿಲ್ಲದೆ ಅಲ್ಪಾವಧಿ

ಸಾಲಗಳ ಅವಧಿಯನ್ನು ಮುಂದುವರಿಸಿಕೊಂಡು ಹೋಗುವು ದನ್ನು ತಡೆಗಟ್ಟುವುದು. ಸಾಲ್ಕನೆಯ ಉದ್ದೇಶ, ಕಾರ್ಖಾನೆಗಳು ಬಡ್ಡಿದರಗಳ ಹೊಂದಾಣಿಕೆಗಳಿಗೆ ಸ್ಪಂದಿಸುವಂತೆ ಮಾಡುವುದು. ಸಾಲ ಬಿರುಕುಗಳಿಗೆ ಪರಿಹಾರ ಕೆಲವೊಂದು ಮೂಲಗಳ ಸಂಕುಚಿತತೆಯ ಪೆಚ್ಚದಲ್ಲಿ, ಮತ್ತೆ ಕೆಲವು ಮೂಲಗಳಲ್ಲಿ ಆಗುವ ವಿಸ್ತಾರಗಳಿಂದ ಪರಿಹಾರ ದೊರಕಿಸಿಕೊಡುವುದರ ಮೂಲಕ ನಡೆಯಬೇಕು. ಹಣಕಾಸಿನ ದೃಷ್ಟಿಯಿಂದ ಕಾರ್ಖಾನೆಗಳು ಹೆಚ್ಚುಹೆಚ್ಚಾಗಿ ಸ್ವಾವಲಂಬಿಯಾಗುವಂತೆ ಮಾಡುವುದೇ ದೀರ್ಘಾವಧಿಯ ಗುರಿ. ಬೆಲೆಮಟ್ಟವನ್ನು ಆಯ್ದು ಪ್ರಮಾಣಿಕವಾಗಿಟ್ಟುಕೊಂಡು, ಅಗತ್ಯ ಪ್ರಾಧಾನ್ಯ ಬೆಳವಣಿಗೆ ದರವನ್ನು ಗಮನಿಸಿ, ಅಂತರರಾಷ್ಟ್ರೀಯ ಅಂಶಗಳನ್ನು ಗಣನೆಗೆ ತೆಗೆದುಕೊಂಡು ತುಂಬಾ ವ್ಯವಹಾರ ಚಟುವಟಿಕೆಯಿರುವ ಅವಧಿಯ ಗುರಿಗಳನ್ನು ಯೋಜಿಸುವುದು ರಿಸರ್ವ್‌ಬ್ಯಾಂಕಿನ ನೀತಿಯಾಗಬೇಕು. ಆಧಾರಮೌಲ್ಯಗಳು ಅಥವಾ ಸಾಲಯೋಗ್ಯತೆಗಳು ಗರಿಷ್ಠ ಪ್ರಮಾಣದ ಸಾಲಅರ್ಹತೆಗೆ ಅಂಶಮಟ್ಟಗಳಲ್ಲಿ ಆಧಾರವಾಗಬಾರದು. ಈ ಅಂಶಮಟ್ಟದ ಮಿತಿಗಳು, ಪ್ರತಿಯೊಂದು ಕಾಲಾವಧಿಯಲ್ಲಿ, ರಾಷ್ಟ್ರಮಟ್ಟದಲ್ಲಿ ನೀಡಿಕೆಗೆ ಅರ್ಹವಾಗಿರುವ ಹಣನೀಡಿಕೆಯ ಚೌಕಟ್ಟಿನೊಳಕ್ಕೆ ಸರಿಯಾಗಿ ಬರುವಂತಿರಬೇಕು. ಈ ಮಾರ್ಗದ ಅನುಸರಣೆ ಬೆಲೆ ದೃಢತೆಯ ಗುರಿಯನ್ನು ಪಡೆಯುವ ಮತ್ತು ಕಾಪಾಡಿಕೊಳ್ಳುವ ಹಿನ್ನೆಲೆಯಲ್ಲಿ ಅತ್ಯಂತ ಅಗತ್ಯ. ಸಾಲನೀಡಿಕೆಯ ನೀತಿಯ ಅನುಸರಣೆಯಲ್ಲಿ ಅಂಶ–ಮಟ್ಟದಲ್ಲಿನ ಸಾಲವಿಸ್ತರಣೆಯ ಹಕ್ಕುಗಳು ಮತ್ತು ರಾಷ್ಟ್ರೀಯ ಮಟ್ಟದಲ್ಲಿನ ಚೌಕಟ್ಟು ಇವೆರಡರ ನಡುವೆ ಘರ್ಷಣೆ ಆಗುವುದು ಸಹಜವೇ. ಸಮಗ್ರ ಮಟ್ಟದಲ್ಲಿ ಗರಿಷ್ಠ ಮಿತಿ ಇದ್ದೇ

ಶೀರ ಬೇಕಾಗಿರುವಾಗ, ಹಣಕಾಸು ಅಧಿಕಾರಿಗಳಿಗೆ ವಿವರಗಳ ವಿಷಯದಲ್ಲಿ ಆಯ್ದು ತೀರ್ಮಾನಿಸುವ ಅವಕಾಶವಿರಬೇಕು.

ಬ್ಯಾಂಕುಗಳ ಸಾಲನೀಡಿಕೆಯಿಂದ ದಾಸ್ತಾನುಗಳಿಗೆ ಹಣ ಒದಗಿಸುವ ಅನುಪಾತದ ಗುರಿಗಳು ಯಾವುವಾಗಿರಬೇಕು? ಪ್ರಸ್ತುತದ ಪರಿಸ್ಥಿತಿಯಲ್ಲಿ "ಹಣಕಾಸು ಸಂಪನ್ಮೂಲಗಳ" (ಬೇಡಿಕೆ, ಠೇವಣಿ ಮತ್ತು ಸಾರ್ವಜನಿಕರಲ್ಲಿರುವ ನಿವ್ವಳ ಸಮಯ ಠೇವಣಿಗಳು) ಆದಾಯ–ಪರಿಚಲನಾವೇಗ ಸುಮಾರಾಗಿ 3 ಆಗಿದೆ. ಬ್ಯಾಂಕು ಸಾಲದ ಅರ್ಧದಷ್ಟನ್ನು ಈಗ ಸರ್ಕಾರಿ ರಂಗಕ್ಕೆ ನೀಡಲಾಗುತ್ತಿದೆ. ಸರ್ಕಾರಿ ರಂಗದ ಚಟುವಟಿಕೆಗಳು ಭೌತಿಕ ಸರಕುಗಳ ನೀಡಿಕೆಗೆ ಅಥವಾ "ಲಭ್ಯ ಉತ್ಪಾದನೆಗೆ" (ಕೇನ್ಸ್ ಪರಿಭಾಷೆಯನ್ನು ಉಪಯೋಗಿಸುವುದಾದರೆ) ಅತ್ಯಂತ ಕಡಮೆ ಕಾಣಿಕೆಯನ್ನು ನೀಡುತ್ತವೆ ಎಂದು ಭಾವಿಸಿಕೊಳ್ಳೋಣ. ಹಾಗೆಯೇ ಪ್ರಸ್ತುತ ಉತ್ಪಾದನೆಯನ್ನು ವಿಸ್ತೃತವಾಗಿ ಹರಡು ಪ್ರವಕ್ಕೋಸ್ಕರ, ಇಟ್ಟುಕೊಳ್ಳಲಾಗಿರುವ ದಾಸ್ತಾನಿನ ಆಧಾರದ ಮೇಲೆ, ಕೈಗಾರಿಕೆ, ವಾಣಿಜ್ಯ ರಂಗಗಳಿಗೆ ಸಾಲನೀಡಿಕೆಯಾಗುತ್ತಿದೆ ಎಂದು ಭಾವಿಸೋಣ. ನಿವ್ವಳ ಉತ್ಪನ್ನ ಮತ್ತು ದಾಸ್ತಾನಿನ ಅನುಪಾತ ಏಕಕ್ಕೆ ಸಮ ಎಂದಿಟ್ಟುಕೊಂಡರೆ, ಬ್ಯಾಂಕು ಸಾಲದಿಂದ ದಾಸ್ತಾನಿಗೆ ಒದಗಿಸಬಹುದಾದ ಹಣದ ಪ್ರಮಾಣ ಒಟ್ಟು ಉತ್ಪನ್ನ ಮೌಲ್ಯದ $33\frac{1}{3}\%$ರಷ್ಟಾಗಬೇಕು. ಆದರೆ ಈಗ ಒಟ್ಟು ಉತ್ಪನ್ನದ 45%ರಷ್ಟು (ಸುಮಾರು) ಮೌಲ್ಯದ ಸಾಲವನ್ನು ನೀಡಲಾಗುತ್ತಿದೆ; ರಾಷ್ಟ್ರೀಯ ಮಟ್ಟದಲ್ಲಿ ಬೆಲೆ ಸ್ಥಿರತೆಯನ್ನು ಕಾಪಾಡಿಕೊಳ್ಳಲು, ಕೈಗಾರಿಕೆಗೆ ಬ್ಯಾಂಕು ಸಾಲದಲ್ಲಿ ಗಣನೀಯ ಪ್ರಮಾಣದ ಕಡಿತ ಉಂಟಾಗಬೇಕು. ಕಾರ್ಖಾನೆ

ಗಳು ದಾಸ್ತಾನು ಮತ್ತು ಮಾರಾಟಗಳ ನಡುವಣ ಯೋಗ್ಯ ಪ್ರಮಾಣವನ್ನು ಕೆಳಗಿನ ಮಾರ್ಗಗಳಿಂದ ಸಾಧಿಸಬಲ್ಲವು. ತಮ್ಮ ಉತ್ಪಾದನ ಶಕ್ತಿಯನ್ನು ಪೂರ್ಣವಾಗಿ ಬಳಸಿಕೊಳ್ಳುವುದು, ವಾಣಿಜ್ಯ-ಸಾಲಕ್ಕೆ ಹೆಚ್ಚು ಮುಂಗಡ ಸೌಲಭ್ಯಗಳನ್ನು ಏರ್ಪಾಡು ಮಾಡಿಕೊಳ್ಳುವುದು, ಚಿಲ್ಲರೆ ವ್ಯಾಪಾರ ಮಟ್ಟಗಳಿಗೆ ತಮ್ಮ ಸಂಗ್ರಹವನ್ನು ಏಕೇಂದ್ರೀಕರಣ ಮಾಡುವುದು, ಅಪವ್ಯಯಗಳನ್ನು ತಪ್ಪಿಸುವುದು, ಉತ್ತಮವಾಗಿ ಕಾರ್ಯನಿರ್ವಹಿಸುವುದು ಮುಂತಾದ ಕ್ರಮಗಳು, ರಾಷ್ಟ್ರೀಯ ಮಟ್ಟದಲ್ಲಿ, ಮಾಹಿತಿಯನ್ನು ಹೆಚ್ಚು ಉತ್ತಮವಾಗಿ ಸಂಗ್ರಹಿಸುವುದು, ಆಮದು ಅಗತ್ಯಗಳನ್ನು ಮತ್ತು ವಿದೇಶೀ ವಿನಿಮಯದ ಬೇಡಿಕೆಗಳನ್ನು ಬೇಗ ಪೂರೈಸುವುದು, ಸಾಗಣೆಯಲ್ಲಿರುವ ತೊಂದರೆಗಳನ್ನು ತಪ್ಪಿಸುವುದು, ವಿದ್ಯುಚ್ಛಕ್ತಿ ಮತ್ತು ಕಲ್ಲಿದ್ದಲಿನ ಸರಬರಾಜು ಈ ಕ್ರಮಗಳಿಗೆ ಸಹಾಯಕವಾಗುತ್ತವೆ.

ವ್ಯವಹಾರಗಳ ತಾಮಸ ಅವಧಿಯಲ್ಲಿ ಸರ್ಕಾರಿ ಸೆಕ್ಯೂರಿಟಿಗಳನ್ನು ಕೊಂಡು, ಅವನ್ನು ವ್ಯವಹಾರ ಚಟುವಟಿಕೆ ತೀವ್ರವಾಗಿರುವ ಅವಧಿಯಲ್ಲಿ ಮಾರಾಟಮಾಡುವ ರೂಢಿಯನ್ನು ನಮ್ಮ ದೇಶದ ವಾಣಿಜ್ಯಬ್ಯಾಂಕುಗಳು ಅನೂಚಾನವಾಗಿ ನಡೆಸಿಕೊಂಡು ಬಂದಿವೆ. ಈ ಕ್ರಮ ಬ್ಯಾಂಕುಗಳಿಗೆ ಒಂದು ಸಂಪ್ರದಾಯವಾಗಿದೆ. ಇಲ್ಲಿ ವ್ಯಾವಹಾರಿಕ ದೃಷ್ಟಿಯಿಂದ, ಬ್ಯಾಂಕುಗಳ ದ್ರವ್ಯನಿಧಿಗಳ ಮೇಲೆ ಯಾವ ಹೊರೆಯೂ ಆಗುವುದಿಲ್ಲ. ರಿಸರ್ವ್‌ಬ್ಯಾಂಕ್, ಬಡ್ಡಿದರಗಳನ್ನು ಮತ್ತು ಪ್ರತಿಫಲದರಗಳನ್ನು ಯೋಗ್ಯರೀತಿಯಲ್ಲಿ ಏರಿಸುವುದರ ಮೂಲಕ 'ತೊಡರಿನ ಪರಿಣಾಮ' ಉಂಟಾಗುವಂತೆ ಮಾಡಿ ಬ್ಯಾಂಕುಗಳು ವ್ಯವಹಾರ ಚಟುವಟಿಕೆ ತೀವ್ರವಾಗಿರುವ ಅವಧಿಯಲ್ಲಿ ಸೆಕ್ಯೂರಿಟಿಗಳನ್ನು

ಹಾರವಂತೆ ಮಾಡಬಲ್ಲವು. ದ್ರವ್ಯತೆ ಪ್ರಮಾಣವನ್ನು ಹೆಚ್ಚಿಸುವ ಕ್ರಮಗಳು ಮತ್ತು ವ್ಯತ್ಯಾಸಗೊಳ್ಳಬಹುದಾದ ಕಾಯ್ದಿರಿಸಿದ ಅಗತ್ಯತೆಗಳ ಹೆಚ್ಚಳ, ಸೂಕ್ತ ಬಡ್ಡಿ ನೀತಿಗೆ ಪೂರಕವಾದಾಗ ಅತ್ಯಂತ ಬಲಾಢ್ಯವಾದ ಕ್ರಮಗಳಾಗುತ್ತವೆ. ಸಾಲಗಾರರು ಬ್ಯಾಂಕುಗಳಿಂದ ಪಡೆಯುವ ಸಾಲದ ಮೇಲಿನ ಮಧ್ಯಕ ಬಡ್ಡಿ ದರಗಳನ್ನು ಅತ್ಯಂತ ಎತ್ತರಕ್ಕೆ ಹೆಚ್ಚಿಸಬೇಕಾಗುತ್ತದೆ. ಹಣದುಬ್ಬರದ ಒತ್ತಡಗಳು ಅತ್ಯಧಿಕವಾಗಿರುವಾಗ, ಲಾಭ ದರಕ್ಕಿಂತ ಕೆಳಮಟ್ಟದಲ್ಲಿನ ಬಡ್ಡಿದರವು, ಕಾರ್ಖಾನೆಯ ಮಾಲೀಕರನ್ನು ಸ್ವಂತ ನಿಧಿಗಳಿಗಿಂತ ಸಾಲನಿಧಿಯನ್ನು ಬಳಸು ವುದಕ್ಕೆ ಪ್ರೋತ್ಸಾಹಿಸುತ್ತದೆ. ಹಾಗೆಯೇ ಅವರು ಮಾರಾಟ ಕ್ಕಿಂತ, ಅಧಿಕಪ್ರಮಾಣದ ದಾಸ್ತಾನನ್ನು ಮಾರಾಟಮಾಡದೆ ಇಟ್ಟುಕೊಳ್ಳುವಂತೆ ಪ್ರಚೋದಿಸುತ್ತದೆ. ಸಾಲದ ಮೇಲಿನ ಬಡ್ಡಿ ದರಗಳನ್ನು ಕೆಳಗಿನ ಕಾರಣಗಳಿಗಾಗಿ ಏರಿಸುವುದು ಅತ್ಯಗತ್ಯ; ಬ್ಯಾಂಕು ಸಾಲದ ಬೇಡಿಕೆಯನ್ನು ಕಡಮೆ ಮಾಡುವುದಕ್ಕೆ, ಕಾರ್ಖಾನೆಗಳು ಅತ್ಯಧಿಕ ದಾಸ್ತಾನನ್ನು ಹೊಂದದಿರುವಂತೆ ಮಾಡುವುದಕ್ಕೆ, ಕೈಗಾರಿಕೆ-ವಾಣಿಜ್ಯ ಸಂಗಗಳು ತಮ್ಮ ಹಣ-ಕಾಸು ಅಗತ್ಯಗಳನ್ನು ಪೂರೈಸಿಕೊಳ್ಳಲು ತಮ್ಮದೇ ಮೂಲದ ಹಣವನ್ನು ಬಳಸಿಕೊಳ್ಳುವಂತೆ ಮಾಡುವುದಕ್ಕೆ, ಹಣ ಮಾರು ಕಟ್ಟೆಯ ವಿವಿಧ ಭಾಗಗಳಲ್ಲಿ ಹಣದ ಗತಿಯನ್ನು ಸಂಯೋಜಿಸ ವುದಕ್ಕೆ ಮತ್ತು ಬ್ಯಾಂಕುಗಳಿಂದ ಸಾಲ ಪಡೆದು ಅದನ್ನು ಹೆಚ್ಚಿನ ಬಡ್ಡಿಗೆ ಸಾಲ ನೀಡುವ ಮಧ್ಯಸ್ಥಿಕೆ ವ್ಯವಹಾರವನ್ನು ತಪ್ಪಿಸುವುದಕ್ಕೆ ಬ್ಯಾಂಕುಗಳ ಬಡ್ಡಿದರವನ್ನು ಶೇ. 10ಕ್ಕೆ ಅದರ ಆಧಾರಮಟ್ಟದಲ್ಲಿ ಹೆಚ್ಚಿಸಬೇಕು. ಇದು ಶೇವಣಿ ಪ್ರಮಾಣವನ್ನು ಸಹ ಹಿಗ್ಗಿಸುತ್ತದೆ. ಈ ದರಗಳು. ಜೇರಿ

ವಿಧಾನಗಳಿಂದ, ಅಲ್ಪಾವಧಿ ಸಟ್ಟಾ ವ್ಯವಹಾರಗಳಿಂದ ಪಡೆಯಬಹುದಾದ ಲಾಭದರಕ್ಕೆ ಅತ್ಯಂತ ಸಮೀಪವಾಗಿರಬೇಕು. ಅನಧಿಕೃತ ಅಂದಾಜೊಂದರ ಪ್ರಕಾರ, ಪ್ರಸ್ತುತದಲ್ಲಿ ಸರಕುಗಳನ್ನು ಅಕ್ರಮ ದಾಸ್ತಾನು ಮಾಡುವುದರ ಮೂಲಕ ಪಡೆಯಬಹುದಾದ ಲಾಭದರ ಸುಮಾರು 13%ರ ಪ್ರಮಾಣದಲ್ಲಿದೆ. ಹಾಗೆಯೇ, ಕುಟುಂಬಸ್ಥರು ಮತ್ತು ಕಾರ್ಖಾನೆಗಳು ತಮ್ಮಲ್ಲಿ ಕರೆನ್ಸಿಗಳನ್ನು ಹೆಚ್ಚಾಗಿಟ್ಟುಕೊಳ್ಳದೆ ಅದನ್ನು ಬ್ಯಾಂಕುಗಳಲ್ಲಿಡುವ ದೃಷ್ಟಿಯಿಂದ ಮತ್ತು ಬ್ಯಾಂಕಿಗೆ ಪ್ರವಹಿಸುವ ಹಣದ ಮೊತ್ತವನ್ನು ವೃದ್ಧಿಸಲು, ಚಾಲ್ತಿ ಠೇವಣಿಗಳ ಮೇಲೆ ಬಡ್ಡಿ ಕೊಡುವುದನ್ನು ಮತ್ತೆ ಜಾರಿಗೆ ತರಬೇಕು. ಈ ಕ್ರಮಗಳ ಅನುಸಿದ್ಧಾಂತವೆಂದರೆ, ಸರ್ಕಾರದ ಬ್ಯಾಂಕುಗಳ ಮೇಲಿನ ಪ್ರತಿಫಲದರಗಳನ್ನು ಮೇಲ್ಮುಖವಾಗಿ ಪುನರ್ವಿಮರ್ಶಿಸಬೇಕು. ಪ್ರಸ್ತುತದ ದರಗಳನ್ನು ದ್ವಿಗುಣಗೊಳಿಸಬೇಕೆಂದು ವಾದಿಸುವುದಕ್ಕೆ ಒಳ್ಳೆಯ ಅವಕಾಶವಿದೆ. ಹಣದುಬ್ಬರದ ವಿರುದ್ಧ ನೀತಿಯು ದೀರ್ಘಾವಧಿ ದರಗಳು, ಅಲ್ಪಾವಧಿ ದರಗಳಿಗಿಂತ ಹೆಚ್ಚು ಉತ್ತೇಜಕಗಳನ್ನು ಪ್ರತಿಬಿಂಬಿಸುವುದು ಅಗತ್ಯ. ಅಲ್ಪಾವಧಿ ಮತ್ತು ದೀರ್ಘಾವಧಿ ನಡುವಣ ದರಗಳ ಅಂತರವು, ದೀರ್ಘಾವಧಿ ದರಗಳಿಗೆ ಹೆಚ್ಚು ಪರವಾಗಿರುವಂತೆ ವಿಸ್ತರಿಸಬೇಕು. ಹಣಕಾಸು ಸಂಸ್ಥೆಗಳು ಹೆಚ್ಚು ಉಳಿತಾಯಗಳನ್ನು ಸಂಗ್ರಹಿಸಲು ಇವು ಪ್ರೋತ್ಸಾಹಕವಾಗುತ್ತದೆ. ಪ್ರಾವಿಡೆಂಟ್ ಭಾಗದ ಉಳಿತಾಯವನ್ನು ಹೆಚ್ಚು ಮಾಡುವುದು. ಬೋನಸ್‌ನ ಒಂದು ಭಾಗವನ್ನು ಹಕ್ಕುಗಳಾಗಿ ಪರಿವರ್ತಿಸುವ ಕ್ರಮಗಳು. ಉದ್ಯೋಗಿಗಳಿಂದ ಹೆಚ್ಚು ವಿಶೇಷವನ್ನೊದಗಿಸುವ ಉಳಿತಾಯ ಕ್ರಮಗಳಾಗಿದ್ದು ಅವಕ್ಕೆ ಉದ್ಯೋಗಿಗಳಿಂದ

ಹೆಚ್ಚಿನ ಪರ ಪ್ರತಿಕ್ರಿಯೆಯನ್ನು ಪಡೆಯುವ ಸಾಧ್ಯತೆಯಿದೆ. ಇವು ಉಪಯುಕ್ತವಾದ ಕ್ರಮಗಳಾಗುತ್ತವೆ.

ಹಣಕಾಸಿನ ದೃಷ್ಟಿಯಿಂದ ಅತ್ಯಂತ ನಿರುತ್ಸಾಹಕರವಾದ ಉಳಿತಾಯಕ್ರಮದ ಒಂದು ಬೆಳವಣಿಗೆಯೆಂದರೆ, ಬ್ಯಾಂಕು ಸಾಲದ ವೃದ್ಧಿ ಮತ್ತು ಉಳಿತಾಯಗಳ ನಡುವಣ ಅನುಪಾತದಲ್ಲಿನ ಬೆಳವಣಿಗೆ. 1969–70 ಮತ್ತು 1972–73ರ ಅವಧಿಯಲ್ಲಿ ಸಾಲ ಮತ್ತು ಉಳಿತಾಯಗಳ ನಡುವಣ ಪ್ರಮಾಣ 3:1 ಆಗಿತ್ತು. ಇದು 1960-61ರಿಂದ 1965-66ರ ಅವಧಿಯಲ್ಲಿ 1.8 : 1 ಆಗಿತ್ತು. 5ನೇ ಯೋಜನೆಯ ಅವಧಿಯಲ್ಲಿ ಈ ಪ್ರಮಾಣವನ್ನು ಸುಮಾರು 3 : 1ರಲ್ಲಿ ಇಟ್ಟುಕೊಳ್ಳಲಾಗಿದೆ. ಸಾಲದ ಕಡಮೆ ಪ್ರಮಾಣದ ಮೊತ್ತವು ಉಳಿತಾಯಗಳ ರೂಪದಲ್ಲಿ ಹಿಂದಿರುಗುವುದು ಹಣಕಾಸು ರಂಗದ ಆರೋಗ್ಯಕರ ಲಕ್ಷಣವಲ್ಲ. ಇಷ್ಟೇ ಅಲ್ಲದೆ, ವ್ಯವಸ್ಥಿತ ರಂಗದಲ್ಲಿನ ಅನೇಕ ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಕೇವಲ ಸಾಲ ನೀಡಿಕೆಯ ಮಾಧ್ಯಮಗಳಾಗಿ ಕೆಲಸ ಮಾಡುತ್ತಿವೆ. ಇವು ಉಳಿತಾಯ ಮಾಡುವ ಸಾರ್ವಜನಿಕರ ಮತ್ತು ಸಾಲ ಪಡೆದುಕೊಳ್ಳುವವರ ನಡುವಣ ಮಧ್ಯಸ್ಥಿಕೆಯ ಸಂಸ್ಥೆಗಳಾಗಿ ಕೆಲಸ ಮಾಡುತ್ತಿಲ್ಲ. ವ್ಯವಸ್ಥಿತ ಹಣಕಾಸು ಸಂಸ್ಥೆಗಳು, ಹಾಗೂ ವ್ಯವಸ್ಥಿತವಲ್ಲದ ಹಣಕಾಸು ಸಂಸ್ಥೆಗಳ ನಡುವೆ, ಬಡ್ಡಿ ದರಗಳಲ್ಲಿ ವಿಪರೀತ ವ್ಯತ್ಯಾಸಗಳಿರುವುದರಿಂದ ವ್ಯವಸ್ಥಿತ ಹಣಕಾಸು ಸಂಸ್ಥೆಗಳು ಅರ್ಥವ್ಯವಸ್ಥೆಯಲ್ಲಿ ವಿವಿಧ ರಂಗಗಳಲ್ಲಿ ವೃದ್ಧಿಗೊಳ್ಳುತ್ತಿರುವ ಆದಾಯಗಳನ್ನು ಉಳಿತಾಯವಾಗಿ ಆಕರ್ಷಿಸಲು ಸಮರ್ಥವಾಗಿಲ್ಲ. ನಮ್ಮ ಅಭಿಪ್ರಾಯದಲ್ಲಿ, ಸರ್ಕಾರವು, ಅನಗತ್ಯವಾಗಿ ಬ್ಯಾಂಕುಗಳ ಮೇಲೆ ಹಣಕಾಸಿಗಾಗಿ

ಅವಲಂಬಿತವಾಗುವುದು ತಪ್ಪಬೇಕು. ಹಣ ನೀಡಿಕೆಯು ದರದ ಬೆಳವಣಿಗೆಯನ್ನು ತಕ್ಷಣವೇ ತಪ್ಪಿಸುವುದಕ್ಕಾಗಿ, ಬ್ಯಾಂಕುಗಳನ್ನು ನಿಜವಾದ ಮತ್ತು ಕ್ರಿಯಾಶೀಲವಾದ ಉಳಿತಾಯ ಸಂಗ್ರಹ ಸಂಸ್ಥೆಗಳಾಗಿ ಪರಿವರ್ತಿಸಬೇಕು. ಒಟ್ಟು ಠೇವಣಿಗಳ ಪ್ರಮಾಣಕ್ಕೆ ಹೋಲಿಸಿದಂತೆ ನಿಶ್ಚಿತಾವಧಿ ಠೇವಣಿಗಳ ಬೆಳವಣಿಗೆಯ ದರ ಬಹಳ ಕಡಮೆ ವೇಗದಲ್ಲಿ ಹೆಚ್ಚಾಗುತ್ತಿದೆ. ಇತ್ತೀಚೆಗೆ ಅಂದರೆ 1-4-1973ರಿಂದ ಜಾರಿಗೆ ಬಂದಿರುವ ವಾಣಿಜ್ಯ ಬ್ಯಾಂಕುಗಳ ಬಡ್ಡಿದರವು (ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಸೆಪ್ಟಂಬರ್ 1973. ಪುಟ 1432ರ ಆಧಾರದ ಮೇಲೆ), ಪರಿಸ್ಥಿತಿಯನ್ನು ಇನ್ನೂ ಹದಗೆಡಿಸುತ್ತದೆ. ಈ ದರಗಳು ಅಲ್ಪಾವಧಿ ಠೇವಣಿಗೆ ಮಾತ್ರ ಪ್ರೋತ್ಸಾಹ ಕೊಡುವಂತಾಗಿ, ನಿಶ್ಚಿತಾವಧಿ ಠೇವಣಿಗಳನ್ನು ಹೆಚ್ಚು ಪ್ರೋತ್ಸಾಹಿಸುವುದಿಲ್ಲ. ಹಣದುಬ್ಬರಕ್ಕೆ ವಿರೋಧವಾದ ನೀತಿಯನ್ನು ದಕ್ಷವಾಗಿ ಜಾರಿಗೆ ತರುವ ದೃಷ್ಟಿಯಿಂದ ಠೇವಣಿದಾರರಿಗೆ ಹೆಚ್ಚಿನ ಉತ್ತೇಜಕವಾಗುವ ರೀತಿಯಲ್ಲಿ, ಹಣಕಾಸು ಸಂಸ್ಥೆಗಳ ಕಾರ್ಯ ಮತ್ತು ಉತ್ತೇಜಕ ಸ್ವರೂಪಗಳಲ್ಲಿನ ಬದಲಾವಣೆಗಳು ಅಗತ್ಯವಾಗಿವೆ. ಪ್ರಾದೇಶಿಕವಾಗಿ ವಿಕೇಂದ್ರೀಕರಣಗೊಂಡಿರುವ ಬ್ಯಾಂಕಿಂಗ್ ವ್ಯವಸ್ಥೆಯನ್ನು ಪ್ರೋತ್ಸಾಹಿಸುವುದು ಮತ್ತು ವಾಣಿಜ್ಯ ಬ್ಯಾಂಕುಗಳ ಸ್ವರೂಪವನ್ನು ಮಾರ್ಪಾಟು ಮಾಡುವುದರ ಮೂಲಕ ಠೇವಣಿಕೆ-ಧಸಿಕೆಯ ಪ್ರತ್ಯಂತ ವೆಚ್ಚವನ್ನು ಕಡಮೆ ಮಾಡಿ, ಹಣಕಾಸಿನ ಮಧ್ಯಂತರ ನೈಜ ವೆಚ್ಚಗಳನ್ನು ಕಡಿಮೆ ಮಾಡಬೇಕಾಗಿದೆ. 1968-71ರ ನಡುವೆ ಸಂಪಾದನೆ ಮತ್ತು ಬಡ್ಡಿ ನೀಡಿಕೆಗಳು, ಠೇವಣಿಗಳಿಗೆ ಹೋಲಿಸಿದ ಪ್ರಮಾಣದಲ್ಲಿ 4.3%ರಿಂದ

5% ಕ್ಕೆ ಹೆಚ್ಚಾಗಿದೆ. ಹಣಕಾಸು ಸಂಯೋಜನೆಯು ಕಾರ್ಯ ವನ್ನು ತ್ವರಿತಗೊಳಿಸಬೇಕು. ವ್ಯವಸ್ಥಿತ ಹಾಗೂ ವ್ಯವಸ್ಥಿತ ದಲ್ಲಿನ ಸಂಸ್ಥೆಗಳು ಮತ್ತು ರಿಸರ್ವ್ ಬ್ಯಾಂಕ್ ನಡುವೆ ಸರಿಯಾದ ಸಂಬಂಧ ಏರ್ಪಡಲೇಬೇಕಾಗಿದೆ.

## ರಿಸರ್ವ್ ಬ್ಯಾಂಕ್ ಇಂಡಿಯಾಗೆ ಸ್ವಾಯತ್ತತೆ

ವರ್ಷವೊಂದಕ್ಕೆ ಹಣದ ಸರಬರಾಜಿನ ದರದ ಬೆಳವಣಿಗೆಯ ಮೇಲೆ ಗರಿಷ್ಠ ಮಿತಿಯ ಗೊತ್ತುಪಡಿಸುವಿಕೆ, ಹಣಕಾಸುಮಂತ್ರಿ ಮತ್ತು ರಿಸರ್ವ್‌ಬ್ಯಾಂಕಿನ ಗೌರ್ನರ್‌ಗಳ ಮೇಲೆ ಹೆಚ್ಚು ನೈತಿಕ ಜವಾಬ್ದಾರಿಯನ್ನು ಹೇರುತ್ತದೆ. ರಿಸರ್ವ್‌ಬ್ಯಾಂಕಿನ ಮೇಲೆ ರಾಷ್ಟ್ರೀಯ ಅನುಕೂಲತೆಯಾಗುವಂತೆ, "ಕರೆನ್ಸಿ ಮತ್ತು ಸಾಲ"ವನ್ನು ನಿಯಂತ್ರಿಸುವ ಜವಾಬ್ದಾರಿಯನ್ನು ಕಾನೂನುತಃ ಗೊತ್ತುಮಾಡಲಾಗಿದೆ. ಈ ಕಾರ್ಯವನ್ನು ನಿರ್ವಹಿಸಲು ಗರಿಷ್ಠ ಮಿತಿಯು ಒಂದು ಬಲಯುತವಾದ ಪ್ರಮಾಣಸಂಬಂಧಿ ಅಸ್ತ್ರ ವಾಗುತ್ತದೆ. ಕೈಗಾರಿಕೆ-ವಾಣಿಜ್ಯ ರಂಗಗಳಿಗೆ, ಸಾಲ ಬೆಳವಣಿ ಗೆಯ ದರದ ಮೇಲೆ ಯೋಜಿತ ನಿರ್ಬಂಧವನ್ನುಂಟುಮಾಡು ವುದರ ಮೂಲಕ ಹೇಗೆ, ದಾಸ್ತಾನು ಮಾರಾಟ ಪ್ರಮಾಣ ಸಂಬಂಧದ ಮೇಲೆ ಯೋಜಿತಗುರಿಯನ್ನು ಸಾಧಿಸಬಹುದು ಎಂಬುದನ್ನು ಈಗಾಗಲೆ ಸೂಚಿಸಲಾಗಿದೆ. ಹಾಗೆಯೇ ಬಡ್ಡಿ ನೀತಿ, ದ್ರವ್ಯತೆಯ ಮೇಲೆ ನಿಯಂತ್ರಣೆ ಇವು ಹೇಗೆ ದಾಸ್ತಾನು-ಮಾರಾಟ ಪ್ರಮಾಣ ಸಂಬಂಧಗಳಿಗೆ ಪೂರಕವಾಗಿ ಅಗತ್ಯ ಫಲಿತಾಂಶಗಳನ್ನು ದೊರಕಿಸಿಕೊಡಬಲ್ಲವು ಎಂಬುದನ್ನು ಹೇಳಿಯಾಗಿದೆ. ಈ ಕ್ರಮಗಳನ್ನು ಪರಿಪೂರ್ಣವಾಗಿ ಕೈಗೊಳ್ಳು ವುದರ ಮೂಲಕ ಸರ್ಕಾರಕ್ಕೆ ಬ್ಯಾಂಕು ಸಾಲವನ್ನು ಗರಿಷ್ಠ ಮಿತಿಯ ಆವಶ್ಯಕತೆಯ ಚೌಕಟ್ಟಿನೊಳಕ್ಕೆ ತರುವ ರಿಸರ್ವ್

ಬ್ಯಾಂಕಿನ ನೈತಿಕ ಅಧಿಕಾರ ವೃದ್ಧಿಗೊಳ್ಳುತ್ತದೆ. ರಿಸರ್ವ್ ಬ್ಯಾಂಕ್‌ಗೆ ಪಾರ್ಲಿಮೆಂಟ್ ಕಾನೂನಿನ ಪ್ರಕಾರ ನೀಡಿರುವ ಪವಿತ್ರ ಕ್ರಿಯೆಯು, ಆ ಸಂಸ್ಥೆ ಕರೆನ್ಸಿಯ ಮೌಲ್ಯ ದೃಢ ವಾಗಿದ್ದು ಮತ್ತು ಹೆಚ್ಚಾಗುವ ರೀತಿಯಲ್ಲಿ ಸಾಲವನ್ನು ನಿಯಂತ್ರಿಸುವ ಬಗ್ಗೆ ಸಾರ್ವಜನಿಕ ಅಭಿಪ್ರಾಯವು ಮಣಿಯು ವಂತೆ ಮಾಡಲು ಬದ್ಧವಾಗುವಂತೆ ಮಾಡುತ್ತದೆ. ಹಣಕಾಸು ಮಂತ್ರಿಯು ಯಾವುದೇ ನಿರ್ದೇಶನವನ್ನು ರಿಸರ್ವ್‌ಬ್ಯಾಂಕಿಗೆ ನೀಡಬಹುದು. ಹೆಚ್ಚೆಂದರೆ ಇದು ಮೇಲೆ ವಿವರಿಸಿದ ರಿಸರ್ವ್ ಬ್ಯಾಂಕಿನ ಕಾರ್ಯವನ್ನು ಹೆಚ್ಚು ಬಲಯುತವಾಗುವಂತೆ ಮಾಡಬೇಕು ಅಷ್ಟೆ. ಹಣಕಾಸುನೀತಿಯ ವಿಷಯಗಳಲ್ಲೂ ರಿಸರ್ವ್‌ಬ್ಯಾಂಕಿನ ಗೌರ್ನರ್‌ಗೆ ಹಣಕಾಸು ಮಂತ್ರಿ ಅಲ್ಲದೆ ಬೇರೆ ಯಾರೂ ಪ್ರಭಾವವನ್ನು ಬೀರದಂತಹ ಒಂದು ಸಂಪ್ರದಾಯವನ್ನು ಜಾರಿಗೆ ತರಬೇಕು. ಐದನೇ ಪಂಚವಾರ್ಷಿಕ ಯೋಜನೆಯ ಕರಡಿನಲ್ಲಿ ಸೂಚಿಸಿರುವಂತೆ ಮತ್ತು ಸಾಧಾರಣ ವಾಗಿ ವ್ಯಕ್ತಪಡಿಸುವ ಹೇಳಿಕೆಗಳಿಗೆ ಬೆಂಬಲವಾಗುವಂತೆ ಹಣ ಮುಬ್ಬರ ನೀತಿಯ ವಿರೋಧಕ್ಕಾಗಿ ಮತ್ತು ಹಣದ ಬೆಳವಣಿಗೆಯ ದರವನ್ನು ಕಡಮೆ ಮಾಡುವುದರ ಬಗ್ಗೆ ಸಾರ್ವಜನಿಕರಲ್ಲಿರುವ ಬಲವಾದ ಒಲವಿನ ಬಗ್ಗೆ ಗೌರವ ತೋರಿಸುವ ದೃಷ್ಟಿಯಿಂದ ರಿಸರ್ವ್ ಬ್ಯಾಂಕ್ ತನ್ನ ಪಾತ್ರವು ಹಿರಿಮೆಯನ್ನು ಮುಟ್ಟು ವಂತಹ ಕಾರ್ಯಗಳನ್ನು ಕೈಗೊಂಡರೆ ಇದು ಸಾರ್ವಜನಿಕ ಸಂಸ್ಥೆಗಳ ಚೌಕಟ್ಟಿನಲ್ಲಿ ಒಂದು ಸ್ವತಂತ್ರವಾದ ಸಾರ್ವಜನಿಕ ಸ್ವಾಯತ್ತ ಸಂಸ್ಥೆಯಾಗಿ ಹೊರಹೊಮ್ಮುತ್ತದೆ.

ಹಣಮುಬ್ಬರದ ವಿರುದ್ಧ ಬರುವ ವರ್ಗಗಳಲ್ಲಿ ಸಾಧಾರಣವಾಗಿ ಕೈಗೊಳ್ಳುವ ಯಾವುದೇ ಕ್ರಮವು ತನ್ನಷ್ಟಕ್ಕೆ ತಾನೇ

ಪ್ರಾರಂಭಿಕ ಜನ ಅಸಮತೋಲನ ಪರಿಸ್ಥಿತಿಯನ್ನು ಮತ್ತು ಕಪ್ಪು ಹಣದ ಅಸ್ತಿತ್ವದಿಂದ ಉಂಟಾಗುವ ವಿರೂಪಗಳನ್ನು ಹತ್ತಿಕ್ಕಲಾರದು. ಹೀಗಿನ ರೀತಿಯು ಅಸಮತೋಲನವನ್ನು ಮುಂದುವರಿಯಲು ಬಿಡುವಷ್ಟರಮಟ್ಟಿಗೆ ಪರಿಣಾಮವಾಗಿ ಉಂಟಾಗುವ ಆರ್ಥಿಕ ವಿರೂಪತೆಗಳು ಯೋಜಿತ ಕಾರ್ಯಕ್ರಮಗಳಿಗನುಸಾರವಾಗಿ ಸಂಪನ್ಮೂಲಗಳನ್ನು ಯುಕ್ತವಾಗಿ ಉಪಯೋಗಿಸುವುದನ್ನು ತಡೆಗಟ್ಟುತ್ತವೆ. ಹಣಕಾಸು ಮತ್ತು ವಿತ್ತ ನೀತಿಯ ಅಲೆಗಳು 'ಕಪ್ಪುಹಣ'ದ ಬಂಡೆಯ ವಿರುದ್ಧ ವ್ಯರ್ಥವಾಗಿ ಘಟ್ಟಿಸುತ್ತಿರುತ್ತವೆ. ಇಂತಹ ಒಂದು ಪರಿಸ್ಥಿತಿಯಲ್ಲಿ ತಮ್ಮ ನಗದು ಆದಾಯದ ಬಗ್ಗೆ ಅಸ್ಥಿರ ಸ್ವರೂಪವನ್ನು ಹೊಂದಿರುವುದರ ಕಾರಣ ಮತ್ತು ಅಂತಹ ಆದಾಯಗಳು ಕಡಮೆ ಪ್ರಮಾಣದ್ದು ಮತ್ತು ಅನಿಶ್ಚಿತ ಸ್ವರೂಪದ್ದು ಆಗಿರುವ ಕಾರಣ ಬಡವರ್ಗದ ಜನರು ಅತ್ಯಂತ ಹೆಚ್ಚಿನ ಅಸಮಾನ ನ್ಯಾಯಪರಿಸ್ಥಿತಿಗೆ ಈಡಾಗುತ್ತಾರೆ. ಆದ್ದರಿಂದ 1973-74ರ ಬೆಲೆಗಳನ್ನು ನೀತಿಗಳಿಗಾಗಿ ಆಧಾರವಾಗಿಟ್ಟುಕೊಳ್ಳಬೇಕಾಗಿಲ್ಲ. ಎಲ್ಲ ಅಗತ್ಯ ವಸ್ತುಗಳ ಹಣಬೆಲೆಗಳ ಮಟ್ಟವು ಬಡವರು ಜೀವನ ನಡೆಸುವುದಕ್ಕೆ ಅಸಾಧ್ಯವಾದ ಎತ್ತರದ ಮಟ್ಟದಲ್ಲಿದೆ. 1973-74ರಲ್ಲಿ ಇರುವ ಬೆಲೆಗಳಿಗಿಂತ ಕಡಮೆ ಮಟ್ಟದ ಬೆಲೆಯು ನೀತಿಗಳ ಮಾರ್ಗದರ್ಶಿಯಾಗಬೇಕು. ಆದ್ದರಿಂದ ಹಣ ದುಬ್ಬರದ ವಿರೋಧ ನೀತಿಯ ಒಂದು ಅತ್ಯಂತ ಮುಖ್ಯವಾದ ಗುರಿಯು ಸದ್ಯದಲ್ಲಿ ಒಂದೇ ಏಟಿಗೆ ಹಣವನ್ನು ಹಿಂದಕ್ಕೆ ತೆಗೆದುಕೊಳ್ಳುವ ಮತ್ತು ಒಂದೇ ಏಟಿಗೆ ಬೆಲೆಮಟ್ಟಗಳನ್ನು ಕಡಮೆ ಮಾಡುವುದಾಗಬೇಕು.

## ಹಣ ಪೂರೈಕೆಯಲ್ಲಿ ಕಡಿತ

ಪ್ರಸ್ತುತದ ಭಾರತದಲ್ಲಿನ ಪರಿಸ್ಥಿತಿಯಲ್ಲಿ ಅತ್ಯಂತ ಹೆಚ್ಚಿನ ಹಣದುಬ್ಬರ ಪರಿಸ್ಥಿತಿಯಿಂದ ಹಣದುಬ್ಬರವಿಲ್ಲದ ಪರಿಸ್ಥಿತಿಗೆ ಪಕ್ವವಾದ ಪರಿವರ್ತನೆಗಾಗಿ ಮುಖ್ಯವಾಗಿ ಒಂದು ಕ್ರಮವನ್ನು ಕೈಗೊಳ್ಳಬೇಕಾಗುತ್ತದೆ. ಅದೆಂದರೆ ಒಮ್ಮೆಗೆ ಹಣದ ನೀಡಿಕೆಯನ್ನು ಕಡಿತಮಾಡುವ ಹಣಕಾಸು ಸುಧಾರಣೆ. ಇದರ ಪರಿಣಾಮ ಆದಾಯಗಳು ಮತ್ತು ಹಣಬೆಲೆಗಳ ಕಡಿತ. ಬೆಲೆ ಮಟ್ಟಗಳಲ್ಲಿ ಗಣನೀಯ ಪ್ರಮಾಣದ ಇಳಿತಾಯವನ್ನುಂಟು ಮಾಡಲು ರಾಷ್ಟ್ರದ ಹಣದ ಸರಬರಾಜಿನಲ್ಲಿ ಶೇಕಡ 30ರಷ್ಟು ಕಡಿತ ಆಗಬೇಕು. ಈ ಬಗ್ಗೆ ನಮ್ಮ ಶಿಫಾರಸು ಹೀಗಿದೆ : (a) ಸಾರ್ವಜನಿಕರು ಮತ್ತು ಬ್ಯಾಂಕುಗಳ ಬಳಿಯಿರುವ ಎಲ್ಲ ಕರೆನ್ಸಿಗಳು ಮತ್ತು ಎಲ್ಲ ಬ್ಯಾಂಕುಗಳಲ್ಲಿರುವ ಠೇವಣಿಗಳ (ಚಾಲ್ತಿ ಠೇವಣಿಗಳು ಮಾತ್ರ) ಮೌಲ್ಯವನ್ನು ಶೇ. 30ರಷ್ಟು ಕುಗ್ಗಿಸಬೇಕು. ಇದು ಕಡಮೆ ಮೌಲ್ಯದ ನೋಟುಗಳಿಗೆ ಅನ್ವಯವಾಗಬಾರದು. (b) ಹೆಚ್ಚು ಮೌಲ್ಯದ ಕರೆನ್ಸಿಗಳನ್ನು ಹೊಂದಿರುವ ಜನರಿಗೆ ಅವರು ತಮ್ಮ ನೋಟುಗಳ ಮೌಲ್ಯ ಕುಗ್ಗುವಿಕೆಯ ಪರಿಣಾಮವಾಗಿ ಕಳೆದುಕೊಳ್ಳುವ ಮೌಲ್ಯಕ್ಕೆ ಸಮನಾದ ಮೌಲ್ಯವುಳ್ಳ ವಿಶೇಷ ಉಳಿತಾಯ ಸರ್ಟಿಫಿಕೇಟ್‌ಗಳನ್ನು ಕೊಡಬೇಕು. ಈ ರೀತಿಯ ಸರ್ಟಿಫಿಕೇಟ್‌ಗಳನ್ನು ಅವರು ಪಡೆಯುವುದಕ್ಕೆ ಯಾವ ಕಾಲ ಮಿತಿಯನ್ನೂ ಗೊತ್ತುಮಾಡಕೂಡದು. (c) ಬ್ಯಾಂಕು ಖಾತೆದಾರರಿಗೆ, ಕಡಿತವಾಗಿರುವ ಮೌಲ್ಯಕ್ಕೆ ಸಮನಾದ 'ತಡೆಹಿಡಿದ ಜಮಾ' ಲೆಕ್ಕವನ್ನು ನಮೂದಿಸಬೇಕು. (d) ಮೇಲಿನ ರೀತಿಯ ಸರ್ಟಿಫಿಕೇಟ್‌ಗಳು ಮತ್ತು ತಡೆಹಿಡಿದ

ಲೆಕ್ಕದ ಮೊತ್ತಗಳು 20 ವರ್ಷದ ನಂತರ ವಿಮೋಚನೆ ಗೊಳ್ಳುತ್ತವೆ ಅಥವಾ ನಗದಾಗಿ ಪರಿವರ್ತನೆ ಹೊಂದಲು ಯೋಗ್ಯ ವಾಗುತ್ತವೆ. ಆದರೆ ಈ ಮೊತ್ತಗಳ ಮೇಲೆ ವರ್ಷವೊಂದಕ್ಕೆ ಶೇಕಡ 5ರಂತೆ ಬಡ್ಡಿ ದೊರೆಯುತ್ತಾ ಹೋಗುತ್ತದೆ. ಈ ಬಡ್ಡಿಯನ್ನು ಪ್ರತಿವರ್ಷ ಪಾವತಿ ಮಾಡಲಾಗುತ್ತದೆ. ಇದನ್ನು ನಗದಾಗಿ ಪಡೆಯಬಹುದು ಅಥವಾ ತಮ್ಮ ಲೆಕ್ಕಕ್ಕೆ ಜಮಾವಾಗಿ ಪಡೆಯಬಹುದು. ಈ ಮಾರ್ಗದಿಂದ ಗಣನೀಯ ಪ್ರಮಾಣದ ಹಣಸರಬರಾಜು ಜಡವಾಗಿ ಬಿಡುತ್ತದೆ. ಆದರೆ ಇಂತಹ ಕಡಿತದ ಮೇಲೆ ವರ್ಷವೊಂದಕ್ಕೆ ಸುಮಾರು 100 ಕೋಟಿ ರೂಗಳಷ್ಟು ಬಡ್ಡಿ ಪಾವತಿಯನ್ನು ಮಾಡಬೇಕಾಗುತ್ತದೆ.

ಈ ವಿಧಾನದಲ್ಲಿ ಜನರು ತಮ್ಮ ಕರೆನ್ಸಿಗಳನ್ನು ಹೊಸ ನೋಟುಗಳಿಗೆ ಪರಿವರ್ತಿಸಿಕೊಳ್ಳಬೇಕಾಗುವುದಿಲ್ಲ. ಒಂದು ಸುಗ್ರೀವಾಜ್ಞೆಯ ಪ್ರಕಾರ 100ರೂ ನೋಟುಗಳನ್ನು 70ರೂಗೆ ಸಮ ಎಂದು ಘೋಷಿಸಲಾಗುತ್ತದೆ ಅಷ್ಟೆ. ಹಾಗೆಯೇ ಇತರ ಅಧಿಕ ಮೊತ್ತದ ನೋಟುಗಳ ಮೌಲ್ಯ ಸಹ ಶೇ. 30ರಷ್ಟು ಕಡಮೆಯೆಂದು ಘೋಷಿಸಲ್ಪಡುತ್ತದೆ. ಅನಾಣ್ಯೀಕರಣದಲ್ಲಿ ಉಂಟಾಗುವ ಗಲಿಬಿಲಿ ಮುಂತಾದುವಿಲ್ಲದೆ ಮೇಲಿನ ಕ್ರಮದಲ್ಲಿ ಸುಧಾರಣೆಯನ್ನು ತರಬಹುದು. ಹೊಸಮೌಲ್ಯದ ನೋಟು ಗಳನ್ನು ಮತ್ತು ಅದ್ರವ್ಯ ಉಳಿತಾಯ ಸರ್ಟಿಫಿಕೇಟ್‌ಗಳನ್ನು ಅನುಕೂಲ ಬಂದಾಗ ಚಲಾವಣೆಗೆ ತರುತ್ತ ಮುಂದು ವರಿಯಬಹುದು.

ಈ ಕ್ರಮವು ಕೆಲವರು ಸೂಚಿಸುವ ಅನಾಣ್ಯೀ ಕರಣದಲ್ಲಿರುವ, ಹಳೆಯ ನೋಟುಗಳನ್ನು ಹೊಸನೋಟುಗಳಿಗೆ ಬದಲಾಯಿಸುವ ಅನಾನುಕೂಲತೆಗಳಿಲ್ಲದೆ, ಸುಧಾರಣೆಯ

ಅನುಕೂಲತೆಗಳನ್ನು ಹೊಂದಿದೆ. ಇಷ್ಟೇ ಅಲ್ಲದೆ ಅನಾಣ್ಯೀಕರಣದಲ್ಲಿ ಯಾವ ಮುನ್ಸೂಚನೆಯನ್ನೂ ಕೊಡದೆ ಹೊಸ ನೋಟುಗಳನ್ನು ಜಾರಿಗೆ ತರಬೇಕಾಗುತ್ತದೆ. ಇದರಿಂದ ಆಡಳಿತ ವರ್ಗಕ್ಕೆ ವಿಪರೀತ ಪ್ರಯಾಸ ಉಂಟಾಗುವುದಷ್ಟೇ ಅಲ್ಲದೆ, ಕೆಲವರಿಗೆ ಅನ್ಯಾಯಗಳೂ ಸಹ ಆಗುತ್ತವೆ. ನಮ್ಮ ಕ್ರಮದಲ್ಲಿ ಈ ಅನಾನುಕೂಲತೆಗಳನ್ನು ಸುಲಭವಾಗಿ ತಪ್ಪಿಸಬಹುದು. ಇದರ ಜೊತೆಗೆ ಹಣದ ಮೌಲ್ಯದ ಇಳಿಮುಖವನ್ನು ಉಂಟುಮಾಡುವುದರಲ್ಲಿ ಕಡಿತದ ಪ್ರಕಟಣೆಯೇ ಹಣದ ಪೂರೈಕೆಯ ಪ್ರಮಾಣದಲ್ಲಿ ಇಳಿಮುಖವನ್ನುಂಟುಮಾಡುವುದರಲ್ಲಿ ಪರ್ಯವಸಾನವಾಗುತ್ತದೆ. ಇದರ ಪರಿಣಾಮವಾಗಿ ಬೆಲೆಯ ಮಟ್ಟದ ಮೇಲೆ ಅಪೇಕ್ಷಿಸಲಾಗುವ ಪ್ರಭಾವವು ಉಂಟಾಗುತ್ತದೆ. ವಾಸ್ತವವಾಗಿ ಕೆಲವು ಮೌಲ್ಯವುಳ್ಳ ನೋಟುಗಳನ್ನು ಹೊಂದಿರುವವರು (ಹೆಚ್ಚಾಗಿ ಬಡವರು) ಈ ಕ್ರಮದಿಂದ ಅನುಕೂಲವನ್ನು ಪಡೆದುಕೊಳ್ಳುತ್ತಾರೆ. ಏಕೆಂದರೆ ಅವರ ನೋಟುಗಳ ಮೌಲ್ಯ ಕಡಮೆಯಾಗುವುದಿಲ್ಲ. ಬದಲಿಗೆ ಅದು ಹೆಚ್ಚಾಗುತ್ತದೆ. ಆದ್ದರಿಂದ ಈ ಕ್ರಮವನ್ನು ಅನುಸರಿಸುವುದರ ಮೂಲಕ ಹೊಸದಾದ ಯೋಗ್ಯ ಬೆಲೆಮಟ್ಟಗಳಲ್ಲಿ ಆರ್ಥಿಕ ಚಟುವಟಿಕೆಗಳನ್ನು ಅರ್ಥವ್ಯವಸ್ಥೆಯಲ್ಲಿ ಮತ್ತೆ ಪ್ರಾರಂಭಿಸುವುದು ಸಾಧ್ಯವಾಗುತ್ತದೆ.

ಪ್ರಪಂಚದ ಬೇರೆ ಕೆಲವು ರಾಷ್ಟ್ರಗಳಲ್ಲಿ ಹಣದುಬ್ಬರದ ಪರಿಸ್ಥಿತಿ ಕೈಮೀರಿಹೋಗಿದ್ದು, ಕರೆನ್ಸಿ ತನ್ನ ಮೌಲ್ಯವನ್ನು ಕಳೆದುಕೊಂಡು ಬಡವರ ಪರಿಸ್ಥಿತಿಯನ್ನು ಅತ್ಯಂತ ಶೋಚನೀಯವಾಗಿ ಮಾಡಿತ್ತಲ್ಲದೆ ಇಡೀ ಅರ್ಥವ್ಯವಸ್ಥೆ ಕುಸಿದುಬೀಳುವಂತೆ ಮಾಡಿತ್ತು ಎಂಬುದನ್ನು ಸ್ಮರಿಸಬಹುದು. ಅಂತಹ ರಾಷ್ಟ್ರಗಳು

ಹಳೆಯ ಕರೆನ್ಸಿಗಳನ್ನು ಸಂಪೂರ್ಣವಾಗಿ ರದ್ದು ಮಾಡಿ ಹೊಸ ಕರೆನ್ಸಿಗಳನ್ನು ಚಲಾವಣೆಗೆ ತಂದು ಹೊಸ ಹಾದಿಯನ್ನು ಮೆಟ್ಟಿದವು. ನಮ್ಮ ಮೇಲಿನ ಸಲಹೆಯು ರಾಷ್ಟ್ರದಲ್ಲಿ ಅಂತಹ ಅನಾಹುತವೊಂದನ್ನು ತಪ್ಪಿಸಲು ಸಕಾಲದಲ್ಲಿ ಮಾಡಲಾಗಿರುವ ನಮ್ಮ ಒಂದು ಪ್ರಯತ್ನವೆಂಬುದನ್ನು ಇಲ್ಲಿ ಗಮನಿಸಬೇಕು. ನಮ್ಮ ಸೂಚನೆಯನ್ನು, ಅಂತಹ ಅನಾಹುತದಿಂದ ರಾಷ್ಟ್ರವನ್ನು ತಪ್ಪಿಸುವ ಪ್ರಯತ್ನದ ಹಿನ್ನೆಲೆಯಲ್ಲಿ ಪರಿಶೀಲಿಸಬೇಕು. ನಮ್ಮ ಸೂಚನೆ ಮೇಲೆ ನಾವು ವಿವರಿಸಿರುವ ರೀತಿಯ ಅತ್ಯಂತ ಮುಖ್ಯವಾದ ಅಂಶಗಳನ್ನು ಒಳಗೊಂಡಿದೆ ಅಷ್ಟೆ. ಈ ನೀತಿಯನ್ನು ಕಾರ್ಯಗತ ಮಾಡಲು ಬೇಕಾಗುವ ವ್ಯಾಪ್ತವಾದ ವಿವರಣೆಯನ್ನು ಕಂಡುಹಿಡಿಯುವುದು ಅಷ್ಟು ಕಷ್ಟವಲ್ಲ.

## ವೆಚ್ಚ ನೀತಿ

ಕೆಲವೊಂದು ರೀತಿಯ ಸರ್ಕಾರಿ ವೆಚ್ಚಗಳಲ್ಲಿ ಬೆಳವಣಿಗೆಯ ದರವನ್ನು ಮತ್ತು ವೆಚ್ಚ ಪ್ರಮಾಣವನ್ನು ಗಣನೀಯ ಪ್ರಮಾಣದಲ್ಲಿ ಕೈಬಿಡದೆ, ನಾವು ಈಗಾಗಲೆ ಸೂಚಿಸಿರುವ ಶೇ. 5ಕ್ಕಿಂತ ಕಡಮೆಯಾದ ಹಣಪೂರೈಕೆಯ ವಾರ್ಷಿಕ ದರ ನೀತಿಗೆ ಪರಿವರ್ತಿತಗೊಳ್ಳುವುದು ಸಾಧ್ಯವೇ ಇಲ್ಲ. ಸಮಾಜದ ಎಲ್ಲ ವಿಧದ ಸರಕಿನ ಆದಿಶೇಷದ ಮೇಲೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸರ್ಕಾರದ ಹಕ್ಕನ್ನು ವಿಮೋಚನೆಗೊಳಿಸುವ ದೃಷ್ಟಿಯಲ್ಲಿ ಸರ್ಕಾರದ ವೆಚ್ಚದಲ್ಲಿ ಕಡಿತವನ್ನುಂಟುಮಾಡುವ ಸಮಸ್ಯೆಯನ್ನು ಪರಿಶೀಲಿಸಬೇಕು. ಇದರ ಪರಿಣಾಮ ಸರ್ಕಾರಿ ವೆಚ್ಚವು ಆಲೋಚಿಸಿರುವ ಉಪಯೋಗಗಳಿಂದ ಬೇರೆಡಿಕ್ಕಿಗೆ ಭಾಗಶಃ ಸರಕುಗಳು ವಿಮೋಚಿತಗೊಳ್ಳುತ್ತವೆ. ಸರ್ಕಾರದ ವೆಚ್ಚದ ಕಡಿತವನ್ನು, ಬಂಡವಾಳ ಸಂಚಯವನ್ನು ಆಘಾತ

ಗೊಳಿಸದಂತೆ ನೋಡಿಕೊಳ್ಳುವ ರೀತಿಯಲ್ಲಿ ಉದ್ದೇಶಿಸಲಾಗುವುದರಿಂದ ವೆಚ್ಚ ಕಡಿತ, ಬಂಡವಾಳ ಸಂಚಯಕ್ಕೆ ಸಂಬಂಧವಿಲ್ಲದಿರುವ ಬಾಬ್ತುಗಳ ಮೇಲಿನ ಕಡಿತದಿಂದ ಆಗುವಂತೆ ನೋಡಿಕೊಳ್ಳುವುದು ಸಲಹಾರ್ಹ. ಒಂದು ವಸ್ತು ಸಂಚಯದ ಮೇಲಿನ ವೆಚ್ಚಕಡಿತವು ಅಗತ್ಯವಾದರೂ ಅದು ಮೂಲಾವಶ್ಯಕ ಸರಕುಗಳ ಸಂಚಯ ಬಾಬ್ತುಗಳ ಮೇಲೆ ಆಗದಂತೆ ನೋಡಿಕೊಳ್ಳಬೇಕು. ಆದ್ದರಿಂದ ಸರ್ಕಾರದ ವೆಚ್ಚಗಳ ಅನುಕ್ರಮ ಬಾಬ್ತುಗಳನ್ನು ಎಚ್ಚರಿಕೆಯಿಂದ ಲೆಕ್ಕ ಮಾಡಬೇಕಾದ್ದು ಅತ್ಯಗತ್ಯ. ಹೀಗೆ ಮಾಡುವುದರಿಂದ ಯಾವ ಬಾಬ್ತುಗಳ ವೆಚ್ಚಗಳು ಪ್ರಚಲಿತ ಮೂಲಾವಶ್ಯಕ ವಸ್ತುಗಳ ಉತ್ಪನ್ನ ಮತ್ತು ಹೊಸ ಉತ್ಪನ್ನ ದಕ್ಷತೆಯ ಸೃಷ್ಟಿಯ ಬಾಬ್ತುಗಳಿಗೆ ನಡೆಯುತ್ತಿದೆ ಎನ್ನುವುದು ಗೊತ್ತಾಗುತ್ತದೆ. ವಾಸ್ತವವಾಗಿ ಇವರ ಅರ್ಥ ಆಡಳಿತದ ಮೇಲಿನ ವೆಚ್ಚ, ಅನುತ್ಪಾದಕ ಉಪಯೋಗಗಳ ಮೇಲಿನ ವೆಚ್ಚ (ರಕ್ಷಣೆ, ಪೋಲಿಸ್, ತೆರಿಗೆ ಸಂಗ್ರಹ..... ಮುಂತಾದ ಬಾಬ್ತುಗಳು) ಗಳನ್ನು ಕಡಿತ ಮಾಡಬೇಕು ಎಂದು. ಆಡಳಿತ ದಕ್ಷತೆಗೆ ಯಾವ ಧಕ್ಕೆಯೂ ಬರದಂತೆ ಸರ್ಕಾರವು ಕಟ್ಟಡ ಉದ್ಯಮ, ಕಟ್ಟಡ ಸಲಕರಣೆಗಳು, ಸಾರಿಗೆ, ವಿದ್ಯುಚ್ಛಕ್ತಿ ಮುಂತಾದ ಭಾಗಗಳ ಮೇಲೆ ವೆಚ್ಚಗಳನ್ನು ಕಡಮೆ ಮಾಡುವುದು ಸಾಧ್ಯವಿದೆ.

ಸರ್ಕಾರ ವಿವಿಧ ರೀತಿಗಳಲ್ಲಿ ನೀಡುತ್ತಿರುವ ಸಹಾಯಧನ ರೂಪದ ವೆಚ್ಚವನ್ನು ಸಹ ಕಡಮೆ ಮಾಡಬಹುದು. 1971-72 ರಲ್ಲಿ ಇಂತಹ ವೆಚ್ಚಗಳು ಸುಮಾರು 1000 ಕೋಟಿ ರೂ.ಗಳಷ್ಟಾಗಿದ್ದು, ಅವು ಒಟ್ಟು ಆ ವರ್ಷದ ರಾಷ್ಟ್ರೀಯ ಉತ್ಪನ್ನದ ಶೇ. 3 ರಷ್ಟಾಗಿದ್ದವು. ಅತಿಮುಖ್ಯವಾದ ಸಾಮಾಜಿಕ ಹಾಗೂ

ನೈತಿಕ ಗುರಿಗಳನ್ನು ನಿಶ್ಚಿತವಾಗಿ ಸಾಧಿಸುತ್ತಿರುವ ಸಹಾಯ ಧನ ಬಾಬ್ತುಗಳನ್ನು ಬಿಟ್ಟರೆ ಉಳಿದ ರೀತಿಯ ಸಹಾಯಧನ ಗಳನ್ನು ತೀವ್ರವಾಗಿ ಕಡಿತಗೊಳಿಸಬೇಕು.

ಸರ್ಕಾರವು ಕ್ರಮ ಕ್ರಮವಾಗಿ ಉಚ್ಚ, ಮಧ್ಯಮ ಹಾಗೂ ಸ್ವನಿಶ್ಚಿತ ಕಾರ್ಮಿಕ ವರ್ಗಗಳಿಗೆ ಮಾಡುತ್ತಿರುವ ರೆವಿನ್ಯೂ ವೆಚ್ಚಗಳಿಂದ ಕಳಚಿಕೊಳ್ಳಬೇಕು. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಅತ್ಯಂತ ದುರ್ಬಲವಾಗಿರುವ ವರ್ಗಕ್ಕಿಂತ ಅತಿ ಹೆಚ್ಚಾಗಿ ಮೇಲಿನ ಮೂರು ವರ್ಗಗಳಿಗೆ ಭೌತಿಕ ಲಾಭ ವನ್ನುಂಟುಮಾಡುವ ಸರ್ಕಾರದ ರೆವಿನ್ಯೂ ವೆಚ್ಚಗಳನ್ನು (Development Account ಮೇಲಿನ ವೆಚ್ಚವನ್ನೂ ಕೂಡ) ಸರ್ಕಾರವು ಹೆಚ್ಚು ಹೆಚ್ಚಾಗಿ ಸರ್ಕಾರೇತರ ಸಂಸ್ಥೆಗಳ ಮೇಲೆ ಚಾರ್ಜುಗಳು, ಫೀಸು ಮತ್ತು ಲೆವಿಗಳಿಂದ ಬರುವ ಆದಾಯದಿಂದ ಪೂರೈಸಬೇಕು.

ಆಹಾರದ ಅಧಿಕ ಉತ್ಪನ್ನದ ತುರ್ತು ಕಾರ್ಯಕ್ರಮಗಳಿಗೆ ಮತ್ತು ಅರ್ಜೆಂಟಾಗಿ ಮುಗಿಯಬೇಕಾಗಿರುವ ಪ್ರಾಜೆಕ್ಟುಗಳ ನಿರ್ಮಾಣಕ್ಕೆ ರಕ್ಷಣಾದಳದವರನ್ನು ಉಪಯೋಗಿಸಿಕೊಳ್ಳಲು ಪ್ರಾಯಶಃ ಸಾಧ್ಯವೆಂದು ತೋರುತ್ತದೆ.

ನೈಸರ್ಗಿಕ ದುರ್ಘಟನೆಗಳಾದ ಪ್ರವಾಹ, ಕ್ಷಾಮ, ಭೂಕಂಪ ಮುಂತಾದ ಪರಿಸ್ಥಿತಿಗಳಲ್ಲಿ ಪರಿಹಾರಗಳನ್ನು ಒದಗಿಸಲು ಬೇಕಾಗುವ ಹಣಕ್ಕಾಗಿ, ಹಣದುಬ್ಬರ ರಹಿತವಾದ ಬೇರೆಯ ವಿತ್ತ ಮೂಲಗಳನ್ನು ಕಂಡುಹಿಡಿಯಬೇಕೆಂಬ ಅಭಿಪ್ರಾಯದ ಬಗ್ಗೆ ನಮಗೆ ಖಚಿತವಾದ ನಿಲುವಿದೆ. ಇಂತಹ ಒಂದು ಆಲೋಚನೆಯನ್ನು ಮಾಡಲೇಬೇಕು. 1965–66, 1972–73ರ ನಡುವೆ 881 ಕೋಟಿ ರೂಪಾಯಿಗಳನ್ನು

(1972–73 ರಲ್ಲಿ 217 ಕೋಟಿ) ಕೇಂದ್ರ ನೆರವಿನ ರೂಪದಲ್ಲಿ ನೈಸರ್ಗಿಕ ದುರ್ಘಟನೆಗಳ ಪರಿಹಾರ ವೆಚ್ಚಕ್ಕಾಗಿ ವೆಚ್ಚಮಾಡ ಲಾಗಿದೆ. ಈ ದುರ್ಘಟನೆಗಳು ಎರಡು ರೀತಿಯದಾಗಿವೆ. ಮೊದಲನೆಯದು, ಭಾರತದ ಎಲ್ಲ ಭಾಗಗಳ ಮೇಲೆ ಪರಿಣಾಮ ವನ್ನುಂಟುಮಾಡುವಂತಹ ದುರ್ಘಟನೆಗಳು. ಎರಡನೆಯದು ನಿರ್ದಿಷ್ಟ ಪ್ರದೇಶಗಳನ್ನು ಮಾತ್ರ ಸಂಕಷ್ಟಕ್ಕೀಡುಮಾಡುವ ದುರ್ಘಟನೆಗಳು. ದುರ್ಘಟನೆಗಳು ಆಹಾರ ಮತ್ತು ಇತರ ಕೂಲಿಸರಕುಗಳ ಪ್ರವಹಿಸುವಿಕೆಯನ್ನು ಹೆಚ್ಚಾಗಿ ತಡೆಗಟ್ಟು ವುದರಿಂದ ಅವು ನಿರ್ದಿಷ್ಟವಾದ ಸರಕು–ಬೇಡಿಕೆ ಪರಿಣಾಮ ವನ್ನು ಒಳಗೊಂಡಿವೆ. ಇಂತಹ ತುರ್ತು ಪರಿಸ್ಥಿತಿಗಳನ್ನು ಎದುರಿಸಲು ಬೇಕಾದ, ಅದರಲ್ಲೂ ಮುಖ್ಯವಾಗಿ ಎರಡನೆಯ ರೀತಿಯ ದುರ್ಘಟನೆಯ ಪರಿಸ್ಥಿತಿಯನ್ನು ಎದುರಿಸಲು ಬೇಕಾದ ಹಣವನ್ನು ಒದಗಿಸುವುದಕ್ಕೆ ಸರಿಯಾದ ಮಾರ್ಗಗಳೆಂದರೆ (a) ಆದಾಯತೆರಿಗೆ ನೀಡುವ ಕಾರ್ಖಾನೆಗಳು ಮತ್ತು ಕುಟುಂಬ ಮಾಲಿಕರಿಂದ ಕಡ್ಡಾಯವಾದ ಠೇವಣಿ ಯೋಜನೆಗಳಿಂದ ಹಣಸಂಗ್ರಹ, (b) ವ್ಯವಸ್ಥಿತ ರಂಗದಲ್ಲಿನ ಕಾರ್ಮಿಕರು ಮತ್ತು ಸಂಬಳದಾರರ ವೇತನಗಳು ಮತ್ತು ಕೂಲಿಗಳ ಮೇಲೆ ತುರ್ತು ಪರಿಸ್ಥಿತಿ ತೆರಿಗೆಗಳು. ಮತ್ತು (c) ಅಬ್ಕಾರಿ, ಮಾರಾಟ ತೆರಿಗೆ, ಜವಿಾನುಕಂದಾಯ ಮುಂತಾದುವುಗಳ ಮೇಲೆ ಸರ್ಛಾರ್ಜ್. ಸಮಗಿರುವ ಸಸ್ಯದ ಪರಿಸ್ಥಿತಿಯಲ್ಲಿ ವ್ಯವಸ್ಥಿತ ರಂಗದಲ್ಲಿರುವವರು ತಮ್ಮ ಸೇವೆಯಿಂದ ಉಂಟುಮಾಡುವ ನಿವ್ವಳ ಉತ್ಪನ್ನ ಮತ್ತು ಮೌಲ್ಯ ಸೇರಿಸುವಿಕೆಗಳಿಂದ ಒಂದು ಭಾಗವನ್ನು (ಶೇ. 3ರಷ್ಟು ಎಂದಿಟ್ಟುಕೊಳ್ಳೋಣ) ಸರ್ಕಾರ ತುರ್ತು ಪರಿಸ್ಥಿತಿಯ ವೆಚ್ಚ ಉದ್ದೇಶಗಳಿಗಾಗಿ ತಾತ್ಕಾಲಿಕ

ಅವಧಿಯವರೆಗೆ ಪಡೆದುಕೊಳ್ಳಲು ಶಕ್ತವಾಗಬೇಕು. ಇಂತಹ ಕ್ರಮದ ಹಣ ಒದಗಿಸುವಿಕೆಯು ಕೂಲಿ ಸರಕುಗಳನ್ನು ಯಾವ ಕಾಲದಲ್ಲಿ ಆಗತ್ಯವಿದೆಯೋ ಆ ಕಾಲದಲ್ಲೇ ಒದಗಿಸಲು ಸಹಾಯಕವಾಗುತ್ತದೆ. ಇಂತಹ ಒಂದು ಕ್ರಮದ ಸೂಚನೆಯ ಮುಖ್ಯ ಉದ್ದೇಶವೆಂದರೆ ನೈಸರ್ಗಿಕ ದುರ್ಘಟನೆಯ ಪರಿಸ್ಥಿತಿಗೆ ಪರಿಹಾರವೆಂಬ ಹೆಸರಿನಲ್ಲಿ ಹಣದ ಸೃಷ್ಟಿಯನ್ನು ತಪ್ಪಿಸುವುದು. ನಾವು ಸೂಚಿಸಿರುವ ರೀತಿಯ ಹಣ ಒದಗಿಸುವಿಕೆ ಬಡ ಜನರ ನಡುವೆ ನೈಜ ಸರಕುಗಳ ಅಂತರ ವರ್ಗಾವಣೆಯನ್ನು ಸಾಧಿಸಬಲ್ಲದು.

ಅಭಿವೃದ್ಧಿಯೇತರ ಬಾಬ್ತುಗಳ ಮೇಲೆ ಸರ್ಕಾರದ ವೆಚ್ಚವು ಹೆಚ್ಚುತ್ತಿರುವ ಬಗ್ಗೆ ಮತ್ತು ಸರ್ಕಾರದ ವೆಚ್ಚವು ಗಣನೀಯ ಪ್ರಮಾಣದಲ್ಲಿ ಹೆಚ್ಚುತ್ತಿರುವ ಬಗ್ಗೆ ರಾಷ್ಟ್ರದ ಅರ್ಥವಿಜ್ಞಾನಿಗಳ ಮನಸ್ಸಿನಲ್ಲಿ ಗಾಬರಿ ಉಂಟಾಗಿದೆ. ವಿಸ್ತಾರವಾದ ಯೋಜಿತ ಕಾರ್ಯಕ್ರಮಗಳ ಬಗ್ಗೆ ಸಹ ತೃಪ್ತಿಕರವಾದ ವಿಮರ್ಶನ ವಿಧಾನಗಳು ನಡೆಯುತ್ತಿಲ್ಲ. ವಿವಿಧ ಗುಂಪುಗಳ ಒತ್ತಾಯದ ಮೇಲೆ ಅವಶ್ಯವಿದ್ದಂತೆ ನೇಮಿಸಿದ ತೀರ್ಮಾನಗಳಂತೆ ನಿರ್ಧಾರಗಳನ್ನು ತೆಗೆದುಕೊಳ್ಳಲಾಗುತ್ತಿದೆ. ಈ ತೀರ್ಮಾನಗಳು ರಾಷ್ಟ್ರದ ಹಿತಾಸಕ್ತಿಗಳ ದೃಷ್ಟಿಯಿಂದ ಉತ್ತಮ ಫಲಿತಾಂಶಗಳಿಗೆ ದಾರಿ ಮಾಡಿಕೊಡದಂಥವಲ್ಲ. ಅನೇಕ ಸಂದರ್ಭಗಳಲ್ಲಿ ಯೋಜನೆಗಳನ್ನು ಕಾರ್ಯರೂಪಗೊಳಿಸುತ್ತಿರುವುದು ತೀವ್ರವಾದ ಅಶ್ರದ್ಧೆಯಿಂದ ನಡೆಯುತ್ತಿದೆ. ವಿವರಣೆಯನ್ನೇ ಕೊಡಲಾಗದಷ್ಟು ವಿಳಂಬ ಎದ್ದು ಕಾಣುತ್ತಿದೆ. ಪ್ರಾಜೆಕ್ಟುಗಳನ್ನು ಎಚ್ಚರಿಕೆಯಿಂದ ಮೇಲ್ವಿಚಾರಣೆ ನಡೆಸುವ ಮತ್ತು ಅವುಗಳ ಪ್ರಗತಿಯನ್ನು ಸತತವಾಗಿ ಗಮನಿಸುವ ಸಾಕಷ್ಟು ಏರ್ಪಾಡುಗಳು ಹೆಚ್ಚು

ಉಪಯುಕ್ತವಾಗುತ್ತವೆ. ಇದೇ ಸಮಯದಲ್ಲಿ ನಾವು ಮಾಡುವ ಶಿಫಾರಸೆಂದರೆ ಒಂದು ರಾಷ್ಟ್ರೀಯ ವೆಚ್ಚ ಕಮಿಷನ್ನನ್ನು ಸ್ಥಾಪಿಸಬೇಕು. ಈ ಕಮಿಷನ್ ಸರ್ಕಾರಿ ರಂಗದ ಪ್ರಾಜೆಕ್ಟ್‌ಗಳ ಆಯ್ಕೆಯನ್ನು ತೀರ್ಮಾನಿಸುವ ಗುರುತರ ಜವಾಬ್ದಾರಿಯನ್ನು ಹೊರಬೇಕು. ಅರ್ಥವಿಜ್ಞಾನದಲ್ಲಿ ವೆಚ್ಚ-ಲಾಭ ಮೀಮಾಂಸೆಗೆ ಸಂಬಂಧಿಸಿದಂತೆ ಅತ್ಯಂತ ವಿಪುಲವಾದ ಸಾಹಿತ್ಯ ಬೆಳವಣಿಗೆ ನಡೆದಿದೆ. ನಮ್ಮಲ್ಲಿ ಕಳೆದ 50 ವರ್ಷಗಳಲ್ಲಿ ವೆಚ್ಚ-ಲಾಭ ಮೀಮಾಂಸೆಯನ್ನು ಆಧಾರವಾಗಿಟ್ಟುಕೊಂಡು ಪ್ರಾಜೆಕ್ಟು ಗಳನ್ನು ವಿಮರ್ಶಿಸುವ ಪ್ರಯತ್ನ ನಡೆದಿಲ್ಲ. ರಾಷ್ಟ್ರೀಯ ವೆಚ್ಚ ಕಮಿಷನ್ ಈ ಅಂಶಗಳನ್ನು ಗಮನಿಸಿ ನಿರ್ಧಾರಗಳನ್ನು ಕೈಗೊಳ್ಳ ಬೇಕು.

## ತೆರಿಗೆ ನೀತಿ

ಖಾಸಗೀ ರಂಗದಿಂದ ಸರ್ಕಾರಿ ರಂಗಕ್ಕೆ ಸರಕು ಮತ್ತು ಸೇವೆಗಳ ವರ್ಗಾವಣೆಯನ್ನು ಜಾರಿಗೆ ತರಲು ಪ್ರಮುಖ ಅಸ್ತ್ರವಾಗಿ ತೆರಿಗೆ ತನ್ನ ಮಹತ್ವದ ಸ್ಥಾನವನ್ನು ಮತ್ತೆ ಪಡೆದುಕೊಳ್ಳಬೇಕಾಗಿದೆ. ಈ ಅಸ್ತ್ರವನ್ನು ಸಂಪೂರ್ಣವಾಗಿ ಆದಾಯ ವರ್ಗಾವಣೆಗಾಗಿ ಉಪಯೋಗಿಸಿಕೊಳ್ಳಬೇಕಾಗಿದೆ. ಕೇವಲ ಪಟ್ಟಣ ಪ್ರದೇಶಗಳ ಶ್ರೀಮಂತ, ಮಧ್ಯಮ, ವ್ಯವಸ್ಥಿತ ರಂಗದ ಉದ್ಯೋಗಿಗಳಿಂದ ಆದಾಯವನ್ನು ದುರ್ಬಲವರ್ಗದವರಿಗೆ ವರ್ಗಾಯಿಸುವುದಕ್ಕಷ್ಟೆ ಅಲ್ಲದೆ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ಆದಾಯವರ್ಗದವರಿಂದ ಆದಾಯ ವರ್ಗಾವಣೆಗೆ ತೆರಿಗೆ ನೀತಿ ಬಲವಾದ ಅಸ್ತ್ರವಾಗ ಬೇಕಾಗಿದೆ. ಈ ಬಗ್ಗೆ ಇರುವ ಒಂದು ಸೂಚನೆಯೆಂದರೆ ಪ್ರತ್ಯಕ್ಷ ಕೃಷಿ ತೆರಿಗೆಗಳಿಂದ ಬರುವ ತೆರಿಗೆ ಆದಾಯವನ್ನು ನಿಸ್ಸಂಶಯ ಕೃಷಿ

ಉತ್ಪನ್ನದ ಶೇ. 3ರಷ್ಟಕ್ಕಾದರೂ ಹೆಚ್ಚಿಸಬೇಕು. ತಕ್ಷಣದಲ್ಲಿ ಹಣದುಬ್ಬರದ ಒತ್ತಡಗಳನ್ನು ತಡೆಗಟ್ಟಲು ಸುಖವಿಲಾಸಿ ಸರಕುಗಳು ಮತ್ತು ಸೇವೆಗಳ ಮೇಲೆ ಅತ್ಯಂತ ಹೆಚ್ಚಿನ ಭೇದಕ ಅಬ್ಕಾರಿ ಸುಂಕವನ್ನು ಹೇರಬೇಕು. ಕಾರ್ಪೊರೇಷನ್‌ಗಳು ಮತ್ತು ಕಾರ್ಖಾನೆಗಳು ವೆಚ್ಚಗಳ ರೂಪದಲ್ಲಿ ತೆರಿಗೆಗಳನ್ನು ತಪ್ಪಿಸಿಕೊಳ್ಳುವುದನ್ನು ತಡೆಗಟ್ಟಲು ಯಾವ ವಾಣಿಜ್ಯ ವೆಚ್ಚಗಳು ಅಪೇಕ್ಷಿತ, ಯಾವುವು ಅನಪೇಕ್ಷಿತ ಎಂಬುದರ ಬಗ್ಗೆ ಖಚಿತ ನಿಯಮಾವಳಿಗಳನ್ನು ರೂಪಿಸುವುದು ಅತ್ಯಗತ್ಯ. ಉತ್ಪಾದಕ ಉಳಿತಾಯಗಳಿಗೆ ಅತ್ಯಂತ ಹೆಚ್ಚಿನ ಪ್ರೋತ್ಸಾಹ ನೀಡಲು ಮತ್ತು ಸುಖವಿಲಾಸಿ ಹಾಗೂ ಅನಗತ್ಯ ಅನುಭೋಗಗಳನ್ನು ನಿಸ್ತೇಜಗೊಳಿಸಲು ಭಾರತದ ಇಡೀ ತೆರಿಗೆ ವ್ಯವಸ್ಥೆಯನ್ನು ಪುನರೂಪಿತ ಮಾಡಬೇಕಾಗಿದೆ. ಉಳಿತಾಯಗಳನ್ನು ಪ್ರೋತ್ಸಾಹಿಸಲು ಕೆಲವು ನಿರ್ದಿಷ್ಟ ಉಳಿತಾಯಗಳಿಗೆ ತೆರಿಗೆ ವಿನಾಯತಿಯನ್ನು ಕೊಡಬಹುದು. ಹಾಗೆಯೆ ಒಂದು ನಿರ್ದಿಷ್ಟ ಮಟ್ಟಕ್ಕಿಂತ ಹೆಚ್ಚನ್ನು ಉತ್ಪಾದಿಸುವ ಕಾರ್ಖಾನೆಗಳಿಗೂ ಸಹ ತೆರಿಗೆ ವಿನಾಯತಿಯನ್ನು ನೀಡಬಹುದು.

ಮೇಲಿನ ಸಲಹೆಗಳ ತಾರ್ಕಿಕ ಸುಸಂಬದ್ಧತೆಯನ್ನು ನಾವು ದೃಢಪಡಿಸಬೇಕು. ತೆರಿಗೆಯ ಚೌಕಟ್ಟು ಎರಡು ವಿಧದ ಕ್ರಮಗಳನ್ನೊಳಗೊಂಡಿರುತ್ತದೆ. ಮೊದಲನೆಯ ಕ್ರಮ ಉತ್ಪಾದನ ಸಲಕರಣೆ ಮತ್ತು ಕಾರ್ಮಿಕ ದಕ್ಷತೆಯನ್ನು ವ್ಯವಸ್ಥಿತವಾಗಿರುವಂತೆ ಕಾಪಾಡಿಕೊಂಡು ಕನಿಷ್ಠ ಉತ್ಪಾದಕ ಅನುಭೋಗಕ್ಕೆ ದಾರಿಮಾಡಿಕೊಟ್ಟು ಉಳಿಯುವ ವಾರ್ಷಿಕ ಆದಾಯ ಅಧಿಶೇಷವನ್ನು ಸರ್ಕಾರಕ್ಕೆ ವರ್ಗಾಯಿಸುವ

ಕ್ರಮವನ್ನೊಳಗೊಂಡಿರುತ್ತದೆ. ಎರಡನೆಯ ಕ್ರಮ. ಪ್ರಸ್ತುತದ ಅಧಿಕ್ಷೇಪ, ಸಂಚಯಕ್ಕೆ ಎಡೆಮಾಡಿಕೊಡುವಂತೆ ವಿತರಣೆಯನ್ನು ಜಾರಿಮಾಡಿಕೊಡುವ ಕ್ರಮವನ್ನೊಳಗೊಂಡಿರುತ್ತದೆ. ಈ ಕ್ರಮ ಅನುಭೋಗಕ್ಕೆ ಬದಲಾಗಿ, ಸಂಚಯವಾಗುವಂತೆ ಅದರಲ್ಲೂ ನಿರ್ದಿಷ್ಟವಾಗಿ ಅವಶ್ಯಕೇತರ ಅನುಭೋಗವಾಗದಂತೆ ಅದು ನೋಡಿಕೊಳ್ಳುವುದಾಗಿರುತ್ತದೆ. ಎರಡನೆಯ ಕ್ರಮ ಅಧಿಕ್ಷೇಪಕ್ಕೆ ಹೋಲಿಸಿದಂತೆ ತೆರಿಗೆ ಆದಾಯ ಪ್ರಮಾಣವು ಹೆಚ್ಚಾಗುವಂತೆ ನೋಡಿಕೊಳ್ಳುವುದರಿಂದ ಅಷ್ಟು ಹೆಚ್ಚಿನ ಸಿದ್ಧಿಯನ್ನು ಸಾಧಿಸುವುದಿಲ್ಲ. ಬದಲಿಗೆ, ಅಧಿಕ್ಷೇಪಕ್ಕೆ ಹೋಲಿಸಿದಂತೆ ಉಳಿತಾಯದ ಪ್ರಮಾಣ ಹೆಚ್ಚಾಗುವಂತೆ ನೋಡಿಕೊಂಡಾಗ ಅದರಲ್ಲೂ ನಿರ್ದಿಷ್ಟವಾಗಿ ಅಧಿಕ್ಷೇಪಕ್ಕೆ ಹೋಲಿಸಿದಂತೆ ಮೂಲ ಉಳಿತಾಯ ಪ್ರಮಾಣ ಹೆಚ್ಚಾಗುವಂತೆ ನೋಡಿಕೊಂಡಾಗ ಹೆಚ್ಚಿನ ಸಿದ್ಧಿಯನ್ನು ಸಾಧಿಸುತ್ತದೆ. ಸಂಚಯಶಕ್ತಿಗಳು ಮತ್ತು ಮೂಲ ಸಂಚಯಗಳೆರಡನ್ನೂ ಬಳಸಿದಾಗ ಮಾತ್ರ, ಮೇಲಿನ ಎರಡು ಕ್ರಮಗಳು ಒಟ್ಟಾಗಿ ಅರ್ಥವ್ಯವಸ್ಥೆ ಸಾಮಾಜಿಕ ಗುರಿಗಳನ್ನು ತಲುಪಬಲ್ಲವು. ಈ ಗುರಿಯನ್ನು ಮೊದಲನೆಯ ಕ್ರಮವು ಎಷ್ಟರ ಮಟ್ಟಿಗೆ ಪೂರೈಸುತ್ತದೆ ಎನ್ನುವುದು ಎರಡನೆಯ ಕ್ರಮಕ್ಕೆ ಅದು ಎಷ್ಟರಮಟ್ಟಿಗೆ ಪೂರಕವಾಗಬಲ್ಲದು ಎಂಬುದನ್ನು ನಿರ್ಧರಿಸುತ್ತದೆ. ಆದರೆ ಅಧಿಕ್ಷೇಪಕ್ಕೆ ಹೋಲಿಸಿದಂತೆ ತೆರಿಗೆ-ಆದಾಯವನ್ನು ವೃದ್ಧಿಸುವ ಪ್ರಯತ್ನಗಳು, ಅನುತ್ಪಾದಕ ಅಥವಾ ಕಡಿಮೆ ಉತ್ಪಾದಕ ರೀತಿಯಲ್ಲಿ ಅಧಿಕ್ಷೇಪವನ್ನು ಬಳಸಿಕೊಳ್ಳಲು ದಾರಿ ಮಾಡಿಕೊಡುವ ರೀತಿಯು ನಡೆದರೆ, ಅದು ಹೆಚ್ಚು ಸಂಚಯವಾಗುವು

ದಕ್ಕೆ ಮಾರಕವಾಗುತ್ತವೆ. ಹೀಗಾದಾಗ, ವಿತ್ತನೀತಿಗೆ ಆದರ ಗುರಿಮುಟ್ಟುವುದರಲ್ಲಿ ವಿಪರೀತ ಸೋಲಾಗುತ್ತದೆ. ತೆರಿಗೆಗಳನ್ನಾಗಲಿ ವೆಚ್ಚವನ್ನಾಗಲೀ, ರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯ ಶಕ್ತಿಗಳನ್ನು ಉತ್ಪಾದಕ ಉಳಿತಾಯ ಮತ್ತು ದಾಸ್ತಾನುಗಳನ್ನು ಹೆಚ್ಚಿಸುವ ವಿಶಾಲವಾದ ರಾಷ್ಟ್ರೀಯ ಆರ್ಥಿಕ ನೀತಿಯ ಚೌಕಟ್ಟಿನೊಳಗೆ ಮಾತ್ರ ಪರಿಶೀಲಿಸ ಬೇಕಾದ್ದು ಅತ್ಯಗತ್ಯ.

ನಮ್ಮ ಇಂದಿನ ಪ್ರತ್ಯಕ್ಷ ತೆರಿಗೆ ನೀತಿಯನ್ನು ತೀವ್ರವಾಗಿ ಟೀಕಿಸುವುದು ಸರಿಯಾಗೇ ಇದೆ. ಇದು ಬೇರೆ ಬೇರೆ ದರಗಳಲ್ಲಿ ಬೇರೆ ಬೇರೆ ರಂಗಗಳಿಗೆ ವಿಧಿಸುವ ಆದಾಯ ತೆರಿಗೆಗಳ ಸ್ವರೂಪ ವನ್ನು ಪಡೆದಿದ್ದು, ತೆರಿಗೆಕಳ್ಳತನ, ಅಪ್ರಾಮಾಣಿಕತೆಗಳಿಗೆ ಎಡೆಮಾಡಿಕೊಟ್ಟಿದೆ. ತೆರಿಗೆ ನೀತಿಯಲ್ಲಿರುವ ಬಿರುಕುಗಳನ್ನು ಕೂಡಲೆ ಮುಚ್ಚಬೇಕು. ತೆರಿಗೆ ಸಂಗ್ರಹ ಆಡಳಿತವನ್ನು ಸುಧಾರಿಸಬೇಕು. ಇದನ್ನು ಸಮಾಜವಾದ ಅರ್ಥವ್ಯವಸ್ಥೆಯ ಹೆಸರಿಗೆ ತಕ್ಕರೀತಿಯ ದಕ್ಷತೆಯಲ್ಲಿ ನಡೆಸಬೇಕು.

## ವಾಣಿಜ್ಯ ನೀತಿ

ಹಣದುಬ್ಬರದ ವಿರುದ್ಧ ಕ್ರಮಕೈಗೊಳ್ಳುವ ನೀತಿಯ ಹಿನ್ನೆಲೆಯಲ್ಲಿ ವಾಣಿಜ್ಯ ನೀತಿಯನ್ನು ಸರಿಯಾಗಿ ರೂಪಿಸಬೇಕು. ನೀತಿಯು ಪ್ರಸ್ತುತದ ಗುರಿಯಾದ ರಫ್ತು ಹೆಚ್ಚಳ ಮತ್ತು ಆಮದು-ಪ್ರತಿನಿಧಾನದ ಮೂಲಕ ಸ್ವಯಂ ತೃಪ್ತಿಯನ್ನು ಸಾಧಿಸುವ ಎರಡು ಧ್ಯೇಯಗಳಿಗೆ ಧಕ್ಕೆ ತರದಂತೆ ರೂಪಿತವಾಗ ಬೇಕು. ಹಾಗೆಯೇ ಈ ಗುರಿಗಳು ಅತ್ಯಾವಶ್ಯಕ ವಸ್ತುಗಳ ಬೆಲೆಗಳು ಏರದಂತೆ ತಮ್ಮ ಧ್ಯೇಯಗಳನ್ನು ಸಾಧಿಸು

ವಂತಾಗಬೇಕು. ಅದರಲ್ಲೂ ಆಮದು-ನಿಯಂತ್ರಣೆ ಮತ್ತು ಆಮದು ಸುಂಕಗಳ ನೀತಿಯನ್ನು ಹೇಗೆ ರೂಪಿಸಬೇಕೆಂದರೆ ಅದು 'ಸರಿ'ಯಾದ ರೀತಿಯಲ್ಲಿ ರಾಷ್ಟ್ರದೊಳಗೆ ಉತ್ಪನ್ನದಲ್ಲಿ ಆಮದು-ಪ್ರತಿನಿಧಾನವನ್ನು ಸಾಧಿಸುವಂತೆ, ದೀರ್ಘಾವಧಿಯಲ್ಲಿ ಹೆಚ್ಚಿನ ರಕ್ಷಣೆಯನ್ನು ನಿರೀಕ್ಷಿಸದೆ ಮುಂದುವರಿದುಕೊಂಡು ಹೋಗುವ ರೀತಿಯಲ್ಲಿ ಆಗುವಂತಾಗಬೇಕು; ರಫ್ತು ಸಹಾಯಧನದ ಬಾಬ್ತುಗಳನ್ನು ಆಯ್ದುಕೊಳ್ಳುವಾಗಲು ಒಂದು ನಿರ್ದಿಷ್ಟಾವಧಿಯಲ್ಲಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸಹಾಯಧನದ ನೆರವಿಲ್ಲದೆ ಸ್ಪರ್ಧಾತ್ಮಕವಾಗುವ ರಫ್ತುಗಳಿಗೆ ಮಾತ್ರ ಸಹಾಯಧನ ದೊರೆಯುವಂತೆ ಆಯ್ದುಕೊಳ್ಳಬೇಕು. ಇಷ್ಟಬಂದ ರೀತಿಯಲ್ಲಿ ರಫ್ತುಗಳನ್ನು ಉತ್ತೇಜಿಸುವುದು ಇಷ್ಟಬಂದ ರೀತಿಯಲ್ಲಿ, ಆಮದು-ಪ್ರತಿನಿಧಾನಗಳನ್ನು ಕೈಗೊಳ್ಳುವುದು ಅವ್ಯವಸ್ಥಿತ ಆದಾಯ ವಿತರಣೆಗೆ ದಾರಿಮಾಡಿಕೊಡುತ್ತವೆ. ವಾಣಿಜ್ಯ ದೃಷ್ಟಿಯಿಂದ ಕೃಷಿ ಉತ್ಪಾದನೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡುವುದು ಅಗತ್ಯ. ಈ ನೀತಿ ಹೆಚ್ಚಿನ ರಫ್ತು ಆದಾಯದಿಂದ, ಎಣ್ಣೆ ಕೊರತೆಯಿಂದ ಉಂಟಾಗಿರುವ ಬಿಕ್ಕಟ್ಟನ್ನು ಪರಿಹರಿಸಲು ಮತ್ತು ರಾಷ್ಟ್ರ ಒಂದು ಅರ್ಥಪೂರ್ಣವಾದ ಆಮದು ನೀತಿಯನ್ನು ಅನುಸರಿಸಲು ಅಗತ್ಯ. ಆರು ತಿಂಗಳ ಆಮದಿಗೆ ಅಗತ್ಯವಾದ ವಿನಿಮಯ ರಿಸರ್ವ್‌ಗಳನ್ನು ಭದ್ರತಾ ರಿಸರ್ವ್ ಆಗಿ ಶೇಖರಿಸಿಟ್ಟುಕೊಳ್ಳುವುದು ಆವಶ್ಯಕ. ಅನಿಶ್ಚಿತವಾದ ಅಂತರರಾಷ್ಟ್ರೀಯ ಪರಿಸ್ಥಿತಿ ಇರುವ ಈ ಸಂದರ್ಭದಲ್ಲಿ ಇದು ತೀರ ಮುಖ್ಯವಾದ ವಿಷಯ. ಕಟ್ಟಡ ಉದ್ಯಮಗಳನ್ನು ಪುನರ್ನಿಯೋಜಿಸುವುದು, ರಾಷ್ಟ್ರೀಯವಾಗಿ ಲಭಿಸಿರುವ

ಸಂಪನ್ಮೂಲಗಳನ್ನು ಬಳಸಿಕೊಂಡು ಸಾರಿಗೆಯನ್ನು ನಡೆಸುವುದು, ರಾಸಾಯನಿಕ ಗೊಬ್ಬರಗಳ ಬದಲಿಗೆ ಜಾನುವಾರು ಗೊಬ್ಬರ, ಗಳನ್ನು ಬಳಸುವುದು, ಮುಂತಾದ ವಿಧಾನಗಳಿಂದ ತೈಲ ಆಮದನ್ನು ಕಡಮೆಮಾಡಿಕೊಳ್ಳುವುದು ಸಾಧ್ಯ. ಪೀಠೋಪ ಕರಣಗಳಲ್ಲಿ ಸರಳತೆ, ಲೋಹ ವಸ್ತುಗಳ ಬದಲಿಗೆ ಮರದ ಉಪಯೋಗ, ಲೋಹದ ಪಾತ್ರೆಗಳಿಗೆ ಬದಲಾಗಿ ಮಣ್ಣಿನ ಪಾತ್ರೆ ಗಳ ಉಪಯೋಗ ಇವುಗಳಿಂದ ಲೋಹದ ಆಮದನ್ನು ಕಡಮೆ ಮಾಡಬಹುದು. ತೈಲ ಹಾಗೂ ತೈಲವನ್ನುಪಯೋಗಿಸುವ ವಸ್ತುಗಳ ಮೇಲೆ ಅಪ್ರತ್ಯಕ್ಷ ತೆರಿಗೆಗಳನ್ನು ವಿಧಿಸುವುದರ ಮೂಲಕ ತೈಲದಲ್ಲಿ ಮಿತವ್ಯಯವನ್ನು ಸಾಧಿಸುವುದು ಸಾಧ್ಯ. ಸಣ್ಣಕೈಗಾರಿಕೆ ಮತ್ತು ಗೃಹಉದ್ಯಮಗಳ ವಸ್ತುಗಳನ್ನು ಹೆಚ್ಚು ಜನಪ್ರಿಯವನ್ನಾಗಿ ಮಾಡಲು ಸಾಕಷ್ಟು ಸಾಧ್ಯತೆಗಳಿವೆ ಎಂಬುದನ್ನು ಸಹ ಗಮನಿಸಬೇಕು.

## ಹೊರರಾಷ್ಟ್ರಗಳ ಹಣದುಬ್ಬರದ ಪರಿಣಾಮ

ಹೊರರಾಷ್ಟ್ರಗಳಲ್ಲಿನ ಬೆಲೆ ಹೆಚ್ಚಳವು ಭಾರತದ ಹಣ ದುಬ್ಬರದ ಮೇಲೆ ಎಷ್ಟರಮಟ್ಟಿಗೆ ಪ್ರಭಾವ ಬೀರಿವೆ? 1972–73ರ ವರ್ಷ ರಫ್ತಿನ ವಿಷಯದಲ್ಲಿ ಶ್ರೇಯಸ್ಸಿನ ವರ್ಷವಾಗಿತ್ತು. ರೂಪಾಯನ್ನು ಸ್ಟರ್ಲಿಂಗ್‌ನೊಡನೆ ಸಂಬಂಧಿಸಿದ್ದರಿಂದ ಸಹ ರಫ್ತಿನಲ್ಲಿ ಒಳ್ಳೆಯ ಫಲಿತಾಂಶ ದೊರೆತಿತ್ತು. ಆದರೆ ಆ ವರ್ಷ ಆಮದು ಸಹ ಬಹಳವಾಗಿ ಹೆಚ್ಚಾಗಿತ್ತು. ಹಣದ ನೀಡಿಕೆಯ ಅಂಕಿ ಅಂಶಗಳು, ರಫ್ತು ಸಾಲ ಮತ್ತು ವಾಣಿಜ್ಯ ಪ್ರತ್ಯಯದ ಅಂಕಿ ಅಂಶಗಳು, (ರಿಸರ್ವ್‌ಬ್ಯಾಂಕ್‌ನಿಂದ ಪ್ರಕಟ ವಾಗಿರುವುದರ ಆಧಾರದ ಮೇಲೆ), ಭಾರತದ ಹಣದುಬ್ಬರ

ಭಾಗಶಃ ವಿದೇಶದಿಂದ ಆಮದಾಗಿರುವಂಥದು ಎಂಬ ಸಿದ್ಧಾಂತವನ್ನು ಪುಷ್ಟೀಕರಿಸುವುದಿಲ್ಲ. ಇಷ್ಟೇ ಅಲ್ಲದೆ ಭಾರತದಲ್ಲಿ ಅತ್ಯಂತ ಕಟ್ಟುನಿಟ್ಟಾದ ವಿನಿಮಯ ನಿಯಂತ್ರಣೆಯನ್ನು ಜಾರಿಗೆ ತಂದಿರುವುದರಿಂದ, ಮತ್ತು ದೊಡ್ಡ ಪ್ರಮಾಣದ ಆಮದು ಸುಂಕ ಹಾಗೂ ಅಬ್ಕಾರಿ ಸುಂಕಗಳನ್ನು ಈ ಉದ್ದೇಶಕ್ಕಾಗಿಯೇ ಬಳಸುವುದರಿಂದ, ಭಾರತವನ್ನು, ವಿದೇಶಗಳಲ್ಲಿ ನಡೆಯುವ ಹಣ-ಕಾಸು ಮೌಲ್ಯ ವ್ಯತ್ಯಾಸಗಳಿಂದ ಬಹಳ ಭದ್ರವಾಗಿ ರಕ್ಷಿಸಲಾಗಿದೆ. ತೈಲ ಬಿಕ್ಕಟ್ಟು ಇತ್ತೀಚಿನದು. ಇದು ನಮ್ಮ ಸಗಟುಸೂಚ್ಯಂಕಗಳ ಮೇಲೆ ಪ್ರಭಾವ ಬೀರುವ ಅಂಶಗಳಲ್ಲಿ ತುಂಬಾ ದೂರದಲ್ಲಿರುವ ಅಂಶ ಸಹ.

## ಕೈಗಾರಿಕಾ ಒಪ್ಪಂದ

ನಾವು ನೀಡಿರುವ ಸಲಹೆಗಳು ಬೆಲೆಮಟ್ಟಗಳನ್ನು ಗಣನೀಯ ಪ್ರಮಾಣದಲ್ಲಿ ಕೆಳಗಿಳಿಸಲು ಸಹಾಯಮಾಡಬೇಕು; ಹೀಗಾದಾಗ ಹಣ-ಕೂಲಿಗಳೂ ಸಹ ಕೆಳಗಿಳಿಯುತ್ತವೆ. ಆದರೆ ಕಾರ್ಮಿಕರಿಗೆ ಅವರ ನಗದು ಶಿಲ್ಕಿನ ನೈಜಮೌಲ್ಯಗಳಲ್ಲಿ ವೃದ್ಧಿಯಾಗುವುದರಿಂದ ಹೆಚ್ಚಿನ ಉಪಕಾರವಾಗುತ್ತದೆ. ಹಣದ ನೀಡಿಕೆಯ ಬೆಳವಣಿಗೆಯ ದರದ ಶೇ. 5ರ ಗರಿಷ್ಠಮಿತಿ ಸೂತ್ರವು ಬೆಲೆಗಳನ್ನು ಬಹಳ ಕಡಮೆ ಮಟ್ಟದಲ್ಲಿ ದೃಢವಾಗಿಡಲು ಸಹಾಯಕವಾಗಬೇಕು. ಆದ್ದರಿಂದ ಕೈಗಾರಿಕಾ ಒಪ್ಪಂದದ ಪಾತ್ರ ಈಗ ತುಂಬಾ ಪ್ರಧಾನವಾಗಬೇಕು. ಸ್ವಾತಂತ್ರ್ಯ ಬಂದಂದಿನಿಂದಲೂ, ವ್ಯವಸ್ಥಿತ ರಂಗದ ಕಾರ್ಮಿಕರೆಲ್ಲರ ನೈಜ ಕೂಲಿ ಯಾವ ಹೇಳಿಕೊಳ್ಳುವ ಪ್ರಮಾಣದಲ್ಲೂ ಹೆಚ್ಚಾಗಿಲ್ಲ ಎಂಬುದು ಈಗ ಸ್ಥಿರಗೊಂಡಿದೆ. ಈ ಕಾರಣದಿಂದಾಗಿಯೇ ಕಾರ್ಮಿಕ

ಚಳುವಳಿಯು ಒಂದು ಭಾಗವು ಕೂಲಿಗಳನ್ನು, ಬೆಲೆಗಳಿಗೆ ಸಮನಾಗಿಟ್ಟಿರುವುದಕ್ಕಾಗಿಯೇ ನಿಯೋಜಿತವಾಗಿದೆ. ಬೇರೆ ಕೆಲವು ರಂಗಗಳಿಗಿಂತ ಕೆಲವೊಂದು ರಂಗಗಳಲ್ಲಿ, ಕಾರ್ಮಿಕ ಸಂಘಗಳು ತಮ್ಮ ಬಲದಿಂದಾಗಿ ಹೆಚ್ಚಿನ ಕೂಲಿ ಮತ್ತು ವೇತನಗಳನ್ನು ಪಡೆದು ಕೊಂಡಿರುವುದು ದಿಟ. ಈ ಪರಿಸ್ಥಿತಿ ಇನ್ನು ಹೀಗೆ ಬಹಳ ಕಾಲವವರೆಗೆ ಮುಂದುವರಿಯುವ ಸಾಧ್ಯತೆ ಸಹ ಇದೆ. ಕಾರ್ಮಿಕ ವಿವಾದಗಳಿಗೆ ಏನೇ ಕಾರಣಗಳಿರಲಿ, ಕಾರ್ಮಿಕರ ಬೇಡಿಕೆಗಳು ಎಷ್ಟೇ ನ್ಯಾಯುವಾದುವಾಗಿರಲಿ, ರಾಷ್ಟ್ರವು ಇಂದು ಎದುರಿಸುತ್ತಿರುವ ಬಿಕ್ಕಟಿನ ಪರಿಸ್ಥಿತಿಯಲ್ಲಿ ಉತ್ಪಾದನೆ ನಿಧಾನವಾಗಿ ನಡೆಯುವಂತೆ ಚಳವಳಿಮಾಡುವುದೂ ಕೆಲಸವನ್ನೇ ನಿಲ್ಲಿಸಿ ಬಿಡುವುದೂ ರಾಷ್ಟ್ರದ್ರೋಹವೆಂದೂ ಘೋಷಿಸಲ್ಪಡಬೇಕು. ಹಾಗೆಯೇ, ಒಂದು ಕಾರ್ಮಿಕ ವರ್ಗದ ನೈಜಕೂಲಿಯ ಹೆಚ್ಚಳದ ಬೇಡಿಕೆ ಅದೇ ಕೆಲಸಕ್ಕೆ ಬೇರೆಕಡೆ ದೊರೆಯುತ್ತಿರುವ ಕೂಲಿಗಿಂತ ಕಡಮೆಯಿರುವಾಗ ಮಾತ್ರ ಸಾಧ್ಯವೆಂದು ಘೋಷಿತವಾಗಬೇಕು. ಇದಲ್ಲದೆ ಉತ್ಪಾದಕತೆಯಲ್ಲಿ ಗಣನೀಯ ಹೆಚ್ಚಳದೊಂದಿಗೆ ಕೂಲಿ ಹೆಚ್ಚಳವನ್ನು ಸಂಬಂಧಿಸಬೇಕು. ಅಂದರೆ ಉತ್ಪಾದನೆ ಹೆಚ್ಚಾದಾಗ ಮಾತ್ರ ಕೂಲಿಯನ್ನು ಹೆಚ್ಚಿಸುವ ಪರಿಪಾಠವನ್ನು ರೂಢಿಗೆ ತರಬೇಕು. ದೀರ್ಘಾವಧಿಯಲ್ಲಿ ಶ್ರಮದ ಕೆಲಸಮಾಡುವವರು, ಸಂಬಳ ಪಡೆಯುವ ಕೆಲಸಗಾರರು ಮತ್ತು ವಿವಿಧ ಸಾಮಾಜಿಕ ವರ್ಗದವರ ನಡುವೆ ಸರಿಯಾದ ಸಂಬಂಧಗಳನ್ನು ಕಲ್ಪಿಸುವುದು ಸಾಧ್ಯವಾಗಬೇಕು. ಸಂಬಂಧದಲ್ಲಿ ಕೃಷಿ ಕೈಗಾರಿಕೆ ಮತ್ತು ಸೇವೆಗಳನ್ನು ಒಂದು ಚೌಕಟ್ಟಿನೊಳಕ್ಕೆ ತರಬೇಕು. ಒಂದು

ಸಾಮಾಜಿಕ ಅರ್ಥವ್ಯವಸ್ಥೆಯು ಸಾಮಾಜಿಕವಾಗಿ ನಿರ್ಧರಿತವಾಗುವ ಆದಾಯ ವ್ಯತ್ಯಾಸಗಳನ್ನು ಪ್ರತಿಬಿಂಬಿಸಬೇಕೇ ಹೊರತು ಪೈಪೋಟಿ ಮಾರುಕಟ್ಟೆಯಿಂದ ನಿಗದಿಯಾಗುವ ಅನುಚರಿ ವ್ಯತ್ಯಾಸಗಳನ್ನು ಪ್ರತಿಬಿಂಬಿಸಬಾರದು. ಪ್ರಸ್ತುತ ಪರಿಸ್ಥಿತಿಯಲ್ಲಿ ವಿವಿಧ ಕೈಗಾರಿಕೆ ಮತ್ತು ಇತರ ರಂಗಗಳಲ್ಲಿನ ಲಾಭಗಳು ಮತ್ತು ಕೂಲಿಗಳು ತಮಗೆ ಸೇರಿಲ್ಲದಿರುವ ಹಣ ಆದಾಯದ ಒಂದಂಶವನ್ನು ಅನುಭೋಗಿಸುತ್ತವೆ. ಆದಾಯ ವ್ಯತ್ಯಾಸಗಳ ಬಗ್ಗೆ ವಿಮರ್ಶಾತ್ಮಕ ಅಧ್ಯಯನದ ಅಗತ್ಯವಿದೆ. ಇಂತಹ ಒಂದು ಅಧ್ಯಯನ ವಿವಿಧ ವರ್ಗದ ಜನರಿಗೆ ತಮ್ಮ ಅಧಿಕಾರ ಬಲದಿಂದ ಅಥವಾ ಸ್ಥಾನಮಾನದಿಂದ ಲಭ್ಯವಾಗುತ್ತಿರುವ ಉಚಿತ ನಿವಾಸ, ಸೌಲಭ್ಯ, ಸಹಾಯಧನವನ್ನು ಪಡೆದಿರುವ ವಸತಿಸೌಲಭ್ಯ, ಪ್ರವಾಸ, ಆಹಾರ, ವೈದ್ಯಕೀಯ ಸೌಲಭ್ಯ, ವಿದ್ಯಾಭ್ಯಾಸ, ಸಂಪರ್ಕ ಸೌಲಭ್ಯ ಮುಂತಾದವುಗಳೆಲ್ಲದರ ಮೇಲಿರುವ ಹಕ್ಕನ್ನು ಬೆಳಕಿಗೆ ತರಬೇಕು. ಆದಾಯವ್ಯತ್ಯಾಸಗಳನ್ನು ಕ್ರಮ ಕ್ರಮವಾಗಿ ಕಡಮೆ ಮಾಡುವ ದೃಷ್ಟಿಯಿಂದ ಕೆಲವೊಂದು ಮಾರ್ಗದರ್ಶಿಗಳನ್ನು ರೂಪಿಸಲೇಬೇಕಾಗಿದೆ.

## ಕೈಗಾರಿಕಾ ಸಂಬಂಧಗಳು

ಬೆಲೆಮಟ್ಟವನ್ನು ದೃಢೀಕರಿಸದೆ ಅಥವಾ ಅಂತಹ ಒಂದು ಆಶ್ವಾಸನೆ ಇಲ್ಲದೆ, ಕೈಗಾರಿಕಾ ಒಪ್ಪಂದವನ್ನು ಮನಗಾಣುವುದು ಶಕ್ಯವಾಗುವುದಿಲ್ಲ. ನಮಗಿರುವ ಸದ್ಯದ ಪರಿಸ್ಥಿತಿಯಲ್ಲಿ ಕೂಲಿಗಳನ್ನು ಹೆಚ್ಚಿಸಿಕೊಳ್ಳಲು ಮುಷ್ಕರವೊಂದೇ ಅತಿಪ್ರಧಾನವಾದ ಅಸ್ತ್ರವಾಗಿರುವುದರಿಂದ, ಕೂಲಿ-ಹಗರಣಕ್ಕಾಗಿಯೆ ಹೆಚ್ಚಿನ ಮುಷ್ಕರಗಳು ನಡೆಯುತ್ತಿವೆ. ಈ ಹಿನ್ನೆಲೆಯಲ್ಲಿ

ಕೈಗಾರಿಕಾ ಒಪ್ಪಂದದ ಅರ್ಥ,ಕೂಲಿಮಟ್ಟವನ್ನು ಹೆಪ್ಪುಗಟ್ಟಿಸು ವುದಾಗಬೇಕಾಗುತ್ತದೆ. ಈ ವಿಧಾನವು ನಮ್ಮಲ್ಲಿರುವ ಕೈಗಾರಿಕಾ ಸಂಬಂಧಗಳ ಪರಿಸ್ಥಿತಿಯಲ್ಲಿ, ಕೆಲವೊಂದು ಮೂಲಭೂತ ತೊಡಕುಗಳನ್ನು ಹೋಗಲಾಡಿಸುವುದಿಲ್ಲ, ಅದರಲ್ಲೂ, ಕೆಲಸಕ್ಕೆ ಪ್ರತಿಫಲ ನಿಗದಿ ವಿಧಾನವನ್ನು ಉತ್ತಮಪಡಿಸುವುದಿಲ್ಲ. ವ್ಯವಸ್ಥಿತ ಕೈಗಾರಿಕಾ ರಂಗದಲ್ಲಿನ ಒಂದು ಭಾಗದ ಕಾರ್ಮಿಕರು, ಸಾಮಾಜಿಕವಾಗಿ ಕನಿಷ್ಠವೆಂದು ಗಣಿಸಲ್ಪಡುವುದಕ್ಕಿಂತ ಕಡಮೆ ಮಟ್ಟದ ನೈಜ ಪ್ರತಿಫಲವನ್ನು ಪಡೆಯುತ್ತಿದ್ದಾರೆ. ವ್ಯವಸ್ಥಿತ ಕೈಗಾರಿಕೆಗಳಲ್ಲಿನ ಕೆಲವು ಸೇವೆಗಳ ಪ್ರತಿಫಲ ಸಹ ಹೀಗೆಯೇ ಇದೆ. ಕೈಗಾರಿಕಾ ಒಪ್ಪಂದವು ಈ ಸಂದರ್ಭಗಳ ಪರಿಸ್ಥಿತಿಗಳನ್ನು ಉತ್ತಮಪಡಿಸಲು ಯತ್ನಿಸಬೇಕು. ಇಷ್ಟೇ ಅಲ್ಲದೆ ನಮ್ಮ ಕೂಲಿ ಸ್ವರೂಪದಲ್ಲಿರುವ ಕೆಲವು ಜಟಿಲತೆಗಳನ್ನು ಹೋಗಲಾಡಿಸಬೇಕು. ಭಾರತದ ಇಂದಿನ ಪರಿಸ್ಥಿತಿಯಲ್ಲಿ ಕೂಲಿಗಳು ಕೆಳಗಿನ ನಾಲ್ಕು ಅಂಶಗಳನ್ನು ಒಳಗೊಂಡಿರಬೇಕು: (1) ಸಾಮಾಜಿಕವಾಗಿ ಕನಿಷ್ಠ ಅಗತ್ಯಗಳನ್ನು ಪಡೆಯುವ ಮಟ್ಟ. (2) ಸಾರ್ವತ್ರಿಕ ವರ್ಗದೊಡನೆ ಹೋಲಿಸಿದಂತೆ, ನಿರ್ದಿಷ್ಟವಾದ ಕಾರ್ಮಿಕ-ವರ್ಗದ ಸಾಮಾಜಿಕ-ಉತ್ಪನ್ನಕ್ಕನು ಗುಣವಾಗಿ (1) ರಲ್ಲಿ ಸೂಚಿಸುವುದಕ್ಕಿಂತ ಹೆಚ್ಚಿನ ಪ್ರತಿಫಲ. (3)ಪ್ರತಿಯೊಂದು ಘಟಕದ ಉತ್ಪನ್ನಕ್ಕನುಗುಣವಾಗಿ ವ್ಯತ್ಯಾಸಗೊಳ್ಳಬಹುದಾದ ಒಂದು ಪ್ರತಿಫಲಾಂಶ; ಈ ಅಂಶವನ್ನು ನಿಗದಿಮಾಡುವಾಗ, ಕೈಗಾರಿಕೆಯಲ್ಲಿನ ಆದರ್ಶ ಘಟಕ ಮತ್ತು ಇತರ ಘಟಕಗಳ ಉತ್ಪಾದನ ವ್ಯತ್ಯಾಸವನ್ನು ಗಮನಿಸಬೇಕು. ಉಳಿದ ಘಟಕಗಳು, ಆದರ್ಶಘಟಕದಂತೆಯೇ ದಕ್ಷವಾಗುವಂತೆ

ಕಾರ್ಮಿಕರಿಗೆ ಉತ್ತೇಜಕಗಳಿರಬೇಕು ಮತ್ತು (4) ಅರ್ಥ ವ್ಯವಸ್ಥೆಯಲ್ಲಿ ಉತ್ಪಾದಕತೆ ಮತ್ತು ವಸ್ತುಗಳ ನೀಡಿಕೆಯ ಸಾರ್ವತ್ರಿಕ ಮಟ್ಟವನ್ನನುಸರಿಸಿ, ಪ್ರತಿಫಲದ ಒಂದಂಶವನ್ನು ಸೇರಿಸಬೇಕು. ಕೆಲವೊಂದೇ ಸಂದರ್ಭಗಳಲ್ಲಿ (4) ನೆಯ ಅಂಶವು ಋಣ ಸ್ವರೂಪದ್ದಾಗಿರುತ್ತದೆ; ಈ ಅಂಶವು ರಾಷ್ಟ್ರದಲ್ಲಿನ ಅಲ್ಪಾವಧಿ ಪರಿಸ್ಥಿತಿಗಳು, ಕೂಲಿಸರಕುಗಳ ಪೃಥನೀಡಿಕೆಗಳನ್ನು ಹೊಂದಿಕೊಂಡಂತೆ ವ್ಯತ್ಯಾಸಗೊಳ್ಳುವುದು ಸಾಧ್ಯವಿರಬೇಕು. ಹವಾಮಾನ ಪರಿಸ್ಥಿತಿ ಮುಂತಾದ ಅಂಶಗಳನ್ನು ಅನುಸರಿಸಿ ಈ ಅಂಶವನ್ನು ನಿಗದಿ ಮಾಡಬೇಕು. ಪ್ರತಿಯೊಂದು ಕಾರ್ಖಾನೆಯಲ್ಲೂ ಕನಿಷ್ಠ ಕೆಲಸದ ನಿಯಮಾವಳಿಗಳನ್ನು ಗೊತ್ತುಮಾಡುವಾಗ, ಸಮಯ ಮತ್ತು ಚಲನೆ ಅಧ್ಯಯನಕ್ಕೆ ಸಾಕಷ್ಟು ಗಮನ ನೀಡಬೇಕು.

ಕೈಗಾರಿಕಾ ಸಂಬಂಧಗಳ ಬಗ್ಗೆ ಅತ್ಯಂತ ಪರಿಣತರ ಅಭಿಪ್ರಾಯವೆಂದರೆ, ತಾರ್ಕಿಕ ರಾಷ್ಟ್ರೀಯ ಆಧಾರವನ್ನು ಹೊಂದಿರುವ ಕೂಲಿವ್ಯವಸ್ಥೆ ಭಾರತದಲ್ಲಿಲ್ಲ ಎಂಬುದು. ಮೂಲ ಆವಶ್ಯಕ ವಸ್ತುಗಳ ಸರಬರಾಜಿನಲ್ಲಿ ಅತ್ಯಂತ ಹೆಚ್ಚಿನ ಅನಿಶ್ಚಿತತೆ ಇರುವ ಬಡರಾಷ್ಟ್ರದಲ್ಲಿ, ಕೈಗಾರಿಕಾ ವಿವಾದಗಳು ಪರಿಣಾಮದಲ್ಲಿ ಒಂದುವರ್ಗದ ಕಾರ್ಮಿಕರು ನೈಜಕೂಲಿಸ್ಥಿಯಲ್ಲಿ ಹೆಚ್ಚಿನ ಹಿಸ್ಸೆ ಪಡೆಯಲು ಮಾಡುವ ಹೋರಾಟವಾಗಿರುತ್ತದೆ. ಒಟ್ಟು ಉತ್ಪನ್ನ, ಉತ್ಪಾದಕತೆ, ಕೂಲಿ-ಸರಕುಗಳ ಸಂಗ್ರಹಕ್ಕೆ ಸಂಬಂಧಿಸಿದ ಚಟುವಟಿಕೆಗಳು ತೀವ್ರವಾಗಿ ಹೆಚ್ಚಾಗದೆ, ಇಡೀ ಕಾರ್ಮಿಕ ವರ್ಗದ ನೈಜಕೂಲಿ ಮಟ್ಟಗಳನ್ನು ಹೆಚ್ಚುಮಾಡುವುದು ಸಾಧ್ಯವೇ ಇಲ್ಲ. ಆದ್ದರಿಂದ ಭಾರತದ ಪ್ರಸ್ತುತ ಪರಿಸ್ಥಿತಿಯಲ್ಲಿ (a) ಕೂಲಿ-ಸರಕುಗಳ

ಉತ್ಪನ್ನ, ವೃದ್ಧಿ, (b) ಈ ರಂಗದಲ್ಲಿ ಸತತವಾಗಿ ಬಂಡವಾಳ ಸಂಚಯದ ಹೆಚ್ಚಳ, (c) ಕೂಲಿಸರಕುಗಳ ಉತ್ಪಾದನ ಚಟುವಟಿಕೆಯಲ್ಲಿ ಗಣನೀಯ ಹೆಚ್ಚಳ. ಮತ್ತು (d) ಯೋಚಿತ ರೀತಿಯಲ್ಲಿ ಜನಸಂಖ್ಯಾಬೆಳವಣಿಗೆಯ ನಿಯಂತ್ರಣೆಗಳು ನಡೆಯದೆ ಅಸಂಖ್ಯಾತರಾದ ಕಾರ್ಮಿಕ ವರ್ಗದವರ ಜೀವನ ಪರಿಸ್ಥಿತಿ ಉತ್ತಮಗೊಳ್ಳುವುದು ಸಾಧ್ಯವಿಲ್ಲ. ಇವುಗಳಲ್ಲಿ (a) (b) (c) ಕ್ರಮಗಳು ಪ್ರತಿಯೊಂದು ಅಲ್ಪಾವಧಿಯಲ್ಲೂ ಅತ್ಯಂತ ಮಹತ್ವದ್ದಾಗಿವೆ.

ವಿವಿಧವರ್ಗಗಳ ಶ್ರಮಿಕರ ನಡುವೆ ಉತ್ಪಾದನೆಗಾಗಿ ಉತ್ತೇಜಕಗಳು, ಉಳಿತಾಯ ಮತ್ತು ಉತ್ಪನ್ನ ಶಕ್ತಿಗಳ ವೃದ್ಧಿಗಾಗಿ ಸತತಪ್ರಯತ್ನ ನಡೆಯುವುದರ ಜೊತೆಗೆ ಸೂಕ್ತವಾದ ರೀತಿಯ ಹಣದುಬ್ಬರದ ಮೇಲಿನ ನಿಯಂತ್ರಣ, ನಮ್ಮ ಕೈಗಾರಿಕಾ ಸಂಬಂಧಗಳನ್ನು ಹೆಚ್ಚು ಸೂಕ್ತವಾದ ರೀತಿಯಲ್ಲಿ ಮಾರ್ಪಾಟುಮಾಡಲು ಆಧಾರವನ್ನೊದಗಿಸಬಲ್ಲವು ಎಂದು ಹೇಳಬಹುದು. ಈ ಮಾರ್ಗಗಳಲ್ಲಿ ಆಲೋಚನೆ ಮತ್ತು ಕ್ರಿಯೆಗಳನ್ನುಳ್ಳ ಅವಧಿಯಾಗಿ ಒಪ್ಪಂದ ಅವಧಿಗಳು ಕ್ರಿಯೋನ್ಮುಖವಾಗಬಲ್ಲವು.

## ಆದಾಯಗಳನ್ನು ಹೆಪ್ಪುಗಟ್ಟಿಸುವಿಕೆ

ತಕ್ಷಣದಲ್ಲೇ, ಸಂಬಳಗಳು, ಕೂಲಿಗಳು, ಲಾಭ ಮತ್ತು ಡಿವಿಡೆಂಡ್‌ಗಳನ್ನು ಹೆಪ್ಪುಗಟ್ಟಿಸಬೇಕಾಗಿದೆ. ಕಾರ್ಮಿಕರು ಪಡೆಯಬೇಕಾದ ಬಡ್ತಿಗಳನ್ನು ತಡೆಹಿಡಿದಿರುವ ಪಾವತಿಗಳಾಗಿ ಮಾಡಬೇಕಾಗುತ್ತದೆ. ಈ ಬಡ್ತಿಗಳನ್ನು ಅವರ ಪ್ರಾವಿಡೆಂಟ್ ನಿಧಿಗೆ ಜಮಾ ಮಾಡಬಹುದು. ಅವುಗಳಿಂದ ಮುಕ್ತವಾಗಿ ಸಾಲ

ಪಡೆಯುವಂತೆ ಸಹ ಅವಕಾಶ ಮಾಡಿಕೊಡಬಹುದು. 2ನೇ ಮಹಾಯುದ್ಧಾವಧಿಯಲ್ಲಿ ಕೆಲವು ರಾಷ್ಟ್ರಗಳು ಶೇ. 100ರಷ್ಟು ಅಧಿಕ ಲಾಭ ತೆರಿಗೆಗಳನ್ನು ವಿಧಿಸಿದ್ದವು. ಇವುಗಳಲ್ಲಿನ ಭಾಗಶಃ ಸಂಗ್ರಹವನ್ನು ಕಡ್ಡಾಯಠೇವಣಿಗಳೆಂದು ಸಹ ಮಾಡಲಾಗಿತ್ತು. ಈ ಕ್ರಮವನ್ನು ಕೆಲವೊಂದು ಸೂಕ್ತ ಬದಲಾವಣೆಗಳೊಂದಿಗೆ ಜಾರಿಗೆ ತರಬಹುದು. ಉಳಿಕೆ ಲಾಭವನ್ನು (ಮತ್ತು ಡಿವಿಡೆಂಡ್‌ಗಳನ್ನು) ಒಂದು ಸಂಗ್ರಹ ನಿಧಿಗೆ ಹಾಕಿ, ಅದರ ವಿತರಣೆಯ ಜವಾಬ್ದಾರಿಯನ್ನು ಒಂದು ಸಮಿತಿಗೆ ನೀಡಬಹುದು. ಈ ಸಮಿತಿಯಲ್ಲಿ ಸದಸ್ಯರಾಗಿ ಯೋಜನಾ ಆಯೋಗ, ರಿಸರ್ವ್ ಬ್ಯಾಂಕ್ ಮತ್ತು ಕೈಗಾರಿಕೆಯ ಪ್ರತಿನಿಧಿಗಳಿರಬಹುದು.

ಹಣಕಾಸು, ವಾಣಿಜ್ಯ, ಕೈಗಾರಿಕಾ ಸಂಬಂಧಗಳಿಗೆ ಸೂಚಿಸಲಾಗಿರುವ ಮೇಲಿನ ಕ್ರಮಗಳು ಬೇಡಿಕೆ ನಿಯಂತ್ರಣ ಸ್ವರೂಪದ ಅಂಗವಾಗಿ ಕ್ರಿಯೋನ್ಮುಖವಾಗಿದ್ದು, ನೀಡಿಕೆಯ ಮೇಲೆ ಕೆಲವೊಂದು ಒಳ್ಳೆಯ ಪರಿಣಾಮಗಳನ್ನು ಹೊಂದಿರುತ್ತವೆ. ಆದರೆ, ಸಂಗ್ರಹ, ಉತ್ಪಾದನೆ ಮತ್ತು ದಕ್ಷತೆಯ ವಿಸ್ತರಣೆಗಳನ್ನೊಳಗೊಂಡಿರುವ ನೀಡಿಕೆಯ ಅಂಶಗಳ ಮೇಲೆ ಎಚ್ಚರವಹಿಸುವುದು ಸಹ ತುಂಬಾ ಅಗತ್ಯ. ಹಣದುಬ್ಬರದ ವಿರುದ್ಧದ ಹೋರಾಟಕ್ಕೆ ಸಂಬಂಧಿಸಿದಂತೆ ನೀಡಿಕೆಯ ಕ್ಷೇತ್ರಕ್ಕೆ ಸಂಬಂಧಿಸಿದ ಕೆಲವು ವಿಷಯಗಳನ್ನು ಪರಿಶೀಲಿಸಲು ಈಗ ನಾವು ಹೊರಡುತ್ತೇವೆ.

**ಸಾರ್ವಜನಿಕ ವಿತರಣೆ ವ್ಯವಸ್ಥೆ**

ಅತ್ಯಂತ ದಕ್ಷವಾದ ಮತ್ತು ಬಲಾಢ್ಯವಾದ ವಿತರಣ ವ್ಯವಸ್ಥೆಯೊಂದು ಇರಬೇಕು. ಸಾರ್ವಜನಿಕ ವಿತರಣೆ ವ್ಯವಸ್ಥೆಯು ಇರಬೇಕಾದುದರ ಉದ್ದೇಶ ಪ್ರತಿಯೊಂದು ಅಲ್ಪಾವಧಿಯಲ್ಲೂ

ಅತ್ಯಂತ ಮುಖ್ಯವಾದ ಆವಶ್ಯಕತೆಗಳು ಸರಿಯಾದ ರೀತಿಯಲ್ಲಿ ಪ್ರವಹಿಸುತ್ತಿರುವಂತೆ ನೋಡಿಕೊಳ್ಳುವುದು. ಇಂತಹ ವ್ಯವಸ್ಥೆಯು (a) ಭದ್ರತೆಗಾಗಿ ದಾಸ್ತಾನಿನ ಸಂಗ್ರಹದ ನಿರ್ಮಾಣ, (b) ಅನುಭೋಗಿಗಳಿಗೆ ಮತ್ತು ಇತರ ಬಳಕೆದಾರರಿಗೆ ಸಂಗ್ರಹದಿಂದ ದಾಸ್ತಾನನ್ನು ಸರಿಯಾಗಿ ವಿತರಣೆ ಮಾಡುವುದು, (c) ಮಾರಾಟ ಮತ್ತು ಕೊಳ್ಳುವಿಕೆ ಕ್ರಮಗಳ ಮೂಲಕ ಸಾಪೇಕ್ಷ ಬೆಲೆಗಳನ್ನು ಕಾಪಾಡಿಕೊಳ್ಳುವುದು ಈ ವಿಷಯಗಳವರೆಗೆ ವ್ಯಾಪ್ತಿಯನ್ನು ಹೊಂದಿರುತ್ತದೆ.

ಅಗತ್ಯ ಕೂಲಿ-ಸರಕುಗಳು ಮತ್ತು ಕೂಲಿಸರಕುಗಳ ಉತ್ಪನ್ನಕ್ಕೆ ಬೇಕಾದ ಎಲ್ಲ ಮುಖ್ಯ ಆದಾನಗಳ ದಾಸ್ತಾನನ್ನು ಸಂಗ್ರಹಿಸಲು ಅತ್ಯಂತ ಹೆಚ್ಚಿನ ಗಮನವನ್ನು ನೀಡಬೇಕಾದದ್ದು ಆವಶ್ಯಕ. ನಾವು ಸೂಚಿಸುವ ಪ್ರಾಧಾನ್ಯತೆಗಳು ಕೆಳಕಂಡಂತಿವೆ: ಒರಟು ಧಾನ್ಯಗಳು, ಉಚ್ಚಮಟ್ಟದ ಧಾನ್ಯಗಳು, ದ್ವಿದಳಧಾನ್ಯಗಳು, ಖಾದ್ಯತೈಲಗಳು, ಜಾನುವಾರಗಳ ಆಹಾರ ಪದಾರ್ಥಗಳು, ಬೀಜಗಳು, ನಾರು, ಸೀಮೆಎಣ್ಣೆ, ಡೀಸೆಲ್ ಎಣ್ಣೆ, ರಾಸಾಯನಿಕ ಗೊಬ್ಬರ ಮತ್ತು ಕಲ್ಲಿದ್ದಲು. ಈ ವಿಷಯಗಳಲ್ಲಿ ದಾಸ್ತಾನು ಸಂಗ್ರಹ ಅತ್ಯಗತ್ಯ. ದಾಸ್ತಾನು ಸಂಗ್ರಹವನ್ನು ನಿರ್ಮಾಣಮಾಡಲು ಬೇಕಾದ ನೀತಿಯ ತಕ್ಷಣದ ಸಿದ್ಧಿಗೆ ಬೇಕಾದ ಮೂರು ಸೂತ್ರಗಳೆಂದರೆ: (1) ಸಾಧ್ಯ ಕನಿಷ್ಠದರ ಅನುಭೋಗದ ಬೆಳವಣಿಗೆಯ ದರಕ್ಕಿಂತ ವೇಗವಾದ ದರದಲ್ಲಿ ಅವುಗಳ ನೀಡಿಕೆಯನ್ನು ಖಾತ್ರಿಮಾಡಿಕೊಳ್ಳುವುದು. (2) ನೀಡಿಕೆಯ ಹೆಚ್ಚಿನ ಭಾಗವನ್ನು ಸಾರ್ವಜನಿಕ ವಿತರಣೆ ವ್ಯವಸ್ಥೆಗೆ ವರ್ಗಾಯಿಸುವುದು ಮತ್ತು (3)

ವ್ಯವಸ್ಥೆಯು ಅತ್ಯಂತ ದಕ್ಷವಾಗಿರುವಂತೆ ಮಾಡಲು ಅಗತ್ಯವಾದ ಸಾಗಣೆ ಮತ್ತು ಸಂಗ್ರಹ ವ್ಯವಸ್ಥೆಗಳಿಗೆ ಏರ್ಪಾಟುಮಾಡು ವುದು. ಅನೇಕ ಕೃಷಿ ವಸ್ತುಗಳಿಗೆ ಸಂಬಂಧಿಸಿದಂತೆ, ಸಾರ್ವ ಜನಿಕ ದಾಸ್ತಾನು ಸಂಗ್ರಹಕ್ಕೆ ಕೆಲವು ಸಂಯೋಜಿತ ಕ್ರಮಗಳು ಅಗತ್ಯವಾಗುತ್ತವೆ. ಅವೆಂದರೆ: (a) ಶ್ರೀಮಂತ ಹಾಗೂ ಮಧ್ಯಮ ವರ್ಗದ ರೈತರ ನಿವ್ವಳ ಆದಾಯಗಳ ಮೇಲೆ ಹೆಚ್ಚಿನ ತೆರಿಗೆ. (b) ಅನುಕ್ರಮ ಲೆವಿ ಪದ್ಧತಿಯೋಜನೆ ಮತ್ತು (c) ಗ್ರಾಮೀಣ ಪ್ರದೇಶದ ಅಧಿಶೇಷ ನಗದು-ದ್ರವ್ಯತೆಯನ್ನು ಹೊರಹೊರಡಿಸುವಿಕೆ ಮತ್ತು ಆ ರಂಗಕ್ಕೆ ದ್ರವ್ಯ ಹಣದ ನೀಡಿಕೆಗೆ ಬಿಗಿಯಾದ ನೀತಿಯ ಅನುಸರಣೆ. (d) ಕೆಲವೊಂದು ಮುಖ್ಯ ರೀತಿಯಲ್ಲಿ ಉಳಿತಾಯ ಮತ್ತು ಹೂಡಿಕೆಯ ಅಭ್ಯಾಸ ವನ್ನು ಪ್ರಚಾರ ಮಾಡುವುದು. ಸರ್ಕಾರ ಕೊಳ್ಳುವ ಬೆಲೆ, ಲೆವಿ ಬೆಲೆ ಮತ್ತು ಇದರ ಸಾಪೇಕ್ಷ ಬೆಲೆಗಳ ನಡುವೆ ಸಮಾನತೆ ಯನ್ನು ಕಾಪಾಡಿಕೊಳ್ಳುವುದು. ಇಲ್ಲಿ ಪರಿಶೀಲಿಸಬಹುದಾದ ಒಂದು ಸಲಹೆಯೆಂದರೆ, ದೀರ್ಘಾವಧಿ ವೆಚ್ಚಗಳ ಆಧಾರದ ಮೇಲೆ, ಕನಿಷ್ಠ ಬೆಂಬಲ ಬೆಲೆಗಳನ್ನು ರೈತರಿಗೆ ಖಾತ್ರಿ ಮಾಡ ಬೇಕು. ಸರ್ಕಾರ ಪಡೆದುಕೊಳ್ಳುವ ಬೆಲೆ, ಮಾರುಕಟ್ಟೆ ಅವಧಿಯ (ಮಾರ್ಷಲ್ ಪರಿಭಾವನೆಯಲ್ಲಿ) ಬೆಲೆಯ ಆಧಾರದ ಮೇಲೆ ನಿಗದಿಯಾಗಬೇಕು. ಸರ್ಕಾರ ಪಡೆದುಕೊಳ್ಳುವ ವಸ್ತು ಗಳ ಮೇಲಿನ ಬೆಲೆ ವ್ಯತ್ಯಾಸಗೊಳ್ಳುವ ಸಾಧ್ಯತೆಗಳನ್ನು ಹೊಂದಿರಬೇಕು. ಸರ್ಕಾರ ಕೊಳ್ಳುವ ಬೆಲೆಗಳನ್ನು ನಿಗದಿ ಮಾಡುವಾಗ, ಬೇಡಿಕೆ-ನೀಡಿಕೆಗಳ ಪರಸ್ಪರ ಕ್ರಿಯೆಯ ಸಾಧ್ಯತೆ ಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಆಹಾರವು ಅತ್ಯಂತ

ಮುಖ್ಯವಾದ ಕೂಲಿಸರಕು. ಆಹಾರಸರಕುಗಳ ಬೆಲೆಗಳು, ಕೂಲಿಗಳು ಮತ್ತು ಹಣ ನೀಡಿಕೆಯ ಮೇಲೆ ಪ್ರಭಾವವನ್ನು ಹೊಂದಿರುವುದರಿಂದ ಮುಖ್ಯವಾದ ಕೃಷಿ ವಸ್ತುಗಳ ಬೆಲೆ ನಿಗದಿಯಲ್ಲಿ ವಾಸ್ತವವಾಗಿ ಹಣಕಾಸು ಅಂಶಗಳು ಅಡಗಿವೆ ಎಂಬುದು ಗಮನಾರ್ಹ. ಆದ್ದರಿಂದ ರಾಷ್ಟ್ರೀಯ ಗಣನೆಗೆ ಪ್ರಾಧಾನ್ಯತೆಯನ್ನು ನೀಡುತ್ತಾ ಸರ್ಕಾರ ತಾನು ಪಡೆಯುವ ಆಹಾರ ವಸ್ತುಗಳ ಬೆಲೆಗಳನ್ನು ನಿಗದಿ ಮಾಡಬೇಕು. ಒಂದು ನಿರ್ದಿಷ್ಟ ಪ್ರದೇಶವಲ್ಲಿ ಎಲ್ಲ ಪರ್ಯಾಯ ಬೆಳೆಗಳಿಗೆ ಸಂಬಂಧಿಸಿದಂತೆ ಒಂದು ಸಂಯೋಜಿತ ಸಾಪೇಕ್ಷ ಬೆಲೆ ನೀತಿಯನ್ನು ಅನುಸರಿಸಬೇಕು. ದಾಸ್ತಾನು ಸಂಗ್ರಹವನ್ನು ಮತ್ತೆ ಮತ್ತೆ ಭರ್ತಿ ಮಾಡಲು ಆಮದುಗಳ ಯೋಜಿತ ಉಪಯೋಗವನ್ನು ಮಾಡುವುದು ಅಗತ್ಯ. ಅವರಲ್ಲೂ ಆಹಾರಧಾನ್ಯಗಳನ್ನು ಮುಂಚೆಯೇ ದಾಸ್ತಾನು ಮಾಡಿಟ್ಟುಕೊಳ್ಳುವುದು ಆವಶ್ಯಕ. ಅತ್ಯಂತ ಹೆಚ್ಚಿನ ಬೆಲೆಗಳಲ್ಲಿ ಮುಂದೆ ಖರೀದಿ ಮಾಡುವುದನ್ನು ತಪ್ಪಿಸಿಕೊಳ್ಳುವ ದೃಷ್ಟಿಯಿಂದ ಇಂತಹ ಕ್ರಮ ಸಲಹಾರ್ಹ. ಈ ಕ್ರಮಕ್ಕೆ ಬೇಕಾಗುವ ವಿದೇಶಿ ವಿನಿಮಯವನ್ನು ಅಗತ್ಯವಾದರೆ ಸರ್ಕಾರ ಬಿಡುಗಡೆ ಮಾಡುವುದು ಅತ್ಯಗತ್ಯ.

ಸಾರ್ವಜನಿಕ ವಿತರಣೆ ಕ್ರಮದಲ್ಲಿ ನೀಡಿಕೆಗಳ ಪ್ರಾಧಾನ್ಯತೆಯ ಬಗ್ಗೆ ಸಾಧ್ಯವಾದಷ್ಟುಮಟ್ಟಿಗೂ ಕೆಳಗಿನ ಕ್ರಮವನ್ನು ಅನುಸರಿಸಬೇಕು: (1) ಕೊರತೆ ಉತ್ಪಾದನೆ ಇರುವ ರಾಜ್ಯಗಳಲ್ಲಿನ ಪಟ್ಟಣದ ಜನರು. (2) ಆರ್ಥಿಕ ಉತ್ಪನ್ನವಿರುವ ರಾಜ್ಯಗಳಲ್ಲಿನ ಪಟ್ಟಣದ ಜನರು. (3) ಕೊರತೆ ರಾಜ್ಯಗಳಲ್ಲಿನ ಗ್ರಾಮೀಣ ಪ್ರದೇಶದ ಬಡಜನರು. (4) ಅಧಿಕ ಉತ್ಪನ್ನ

ವಿರುವ ರಾಜ್ಯಗಳಲ್ಲಿನ ಗ್ರಾಮೀಣ ಪ್ರದೇಶದ ಬಡಜನರು. ಈ ಪ್ರಾಧಾನ್ಯತೆಯು ಉದ್ದೇಶ ಮಿತ ಸರಬರಾಜಿನ ಮೇಲೆ ಮತ್ತು ಅದರಿಂದ ಬೆಲೆಗಳ ಮೇಲೆ ಒತ್ತಡವನ್ನು ತಪ್ಪಿಸುವುದು. ಒರಟು ಧಾನ್ಯದ ಮೇಲಿನ ಸಂಚಾರ ನಿರ್ಬಂಧವನ್ನು ಈ ಕೂಡಲೇ ರದ್ದು ಮಾಡಬೇಕು. ಕೇವಲ ಕನಿಷ್ಠ ಲೆವಿ ಪೂರೈಕೆಯನ್ನು ಮಾತ್ರ ಈ ವಿಷಯದಲ್ಲಿ ಖಾತ್ರಿಮಾಡಿಕೊಳ್ಳಬೇಕು ಅಷ್ಟೆ. ಕೇಂದ್ರವು ಧಾನ್ಯ ಪಡೆದುಕೊಳ್ಳುವ ನೀತಿಯನ್ನು ಕೇವಲ ಉಚ್ಚ ಧಾನ್ಯಗಳಿಗೆ ಮಾತ್ರ ಮೀಸಲಾಗಿಟ್ಟುಕೊಳ್ಳಬೇಕು. ರಾಜ್ಯ ಸರ್ಕಾರಗಳನ್ನು ಲೆವಿಯ ಮೂಲಕ ಅಥವಾ ಬಹಿರಂಗ ಮಾರುಕಟ್ಟೆಯ ಮೂಲಕ ಒರಟು ಧಾನ್ಯವನ್ನು ಪಡೆದುಕೊಳ್ಳುವಂತೆ ಪ್ರೋತ್ಸಾಹಿಸಬೇಕು. ಹೀಗೆ ರಾಜ್ಯ ಸರ್ಕಾರಗಳನ್ನು ತಮ್ಮ ಜನತೆಗೆ ಆಹಾರವನ್ನು ಒದಗಿಸುವ ಕಾರ್ಯದಲ್ಲಿ ನಿರತವಾಗುವಂತೆ ಮಾಡಬೇಕು. ಇತರ ಸಲಹಾರ್ಹ ಸೂಚನೆಗಳೆಂದರೆ, ದೊಡ್ಡ ಪಟ್ಟಣಗಳಲ್ಲಿ, ನಗರಗಳಲ್ಲಿ ಔಪಚಾರಿಕ ಪಡಿತರವನ್ನು ಜಾರಿಗೆ ತರುವುದು, ಅಧಿಕ ಉತ್ಪಾದನೆಯನ್ನು ಸಂಗ್ರಹಿಸುವ ಸಂಸ್ಥೆಗಳನ್ನು ಬಲಪಡಿಸುವುದು, ಎಲ್ಲ ಪ್ರದೇಶಗಳಲ್ಲಿ ನ್ಯಾಯಬೆಲೆ ಅಂಗಡಿಗಳ ಸ್ಥಾಪನೆ.

ಸಾರ್ವಜನಿಕ ವಿತರಣೆ ಕ್ರಮವು, ಅಗತ್ಯವಾದರೆ, ಕೆಲವು ಪದಾರ್ಥಗಳ ವಿಷಯಗಳಲ್ಲಿ ಮತ್ತು ಕೆಲವು ಪ್ರದೇಶಗಳಲ್ಲಿ, ಸಹಕಾರ ಮತ್ತು ವಾಣಿಜ್ಯದಲ್ಲಿರುವ ಇತರ ಮಾರ್ಗಗಳ ಮೂಲಕ ನಡೆಯಬಹುದು. ವಿವಿಧ ರಾಜ್ಯಗಳಲ್ಲಿ ಎಷ್ಟು ಪ್ರಮಾಣದ ದಾಸ್ತಾನು ವಿತರಣೆಯಾಗಬೇಕು ಎಂಬುದನ್ನು ಪ್ರತಿಯೊಂದು ಫಸಲು ಅವಧಿಯಲ್ಲೂ ಸರಿಯಾಗಿ ಯೋಜಿಸ

ಬೇಕು. ವಿತರಣೆಯ ನಿರ್ಣಾಯಕ ಅಂಶ ಆರ್ಥಿಕ ಆಧಾರದ ಮೇಲೆ ನಡೆಯಬೇಕು; ಒಂದು ಅಥವಾ ಅನೇಕ ಕಾರ್ಪೊರೇಷನ್ ಗಳ ಮೂಲಕ ವಿತರಣೆ ಕ್ರಮವನ್ನು ನಡೆಸಿಕೊಂಡು ಹೋಗುವುದು ಸೂಕ್ತ. ರಾಷ್ಟ್ರದ ಎಲ್ಲ ಪಾರ್ಟಿಗಳೂ ಈ ಕಾರ್ಪೊರೇಷನ್ ಗಳ ತೀರ್ಮಾನವನ್ನು ಬೆಂಬಲಿಸುವಂತಿರಬೇಕು. ಈ ದಿಶೆಯಲ್ಲಿ ರಾಜ್ಯ ಸರ್ಕಾರದ ನೀತಿಗಳು ಸರಿಯಾಗಿ ಸಂಯೋಜನೆಗೊಳ್ಳಬೇಕು. ಸದ್ಯದಲ್ಲಿ, ನಾವು ಮುಂದೆ ಶಿಫಾರ್ಸು ಮಾಡಲಿರುವ "ಆರ್ಥಿಕ ಸಮಿತಿ" ರಾಜ್ಯ ಸರ್ಕಾರಗಳ ನೀತಿಗಳನ್ನು ರೂಪಿಸುವಂತೆ ಮತ್ತು ಸಂಯೋಜಿಸುವಂತೆ ಮಾಡಬೇಕು. ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯೂ, ಪರ್ವವಿಡೀ, ಆಹಾರವಸ್ತುಗಳು, ಬಟ್ಟೆ, ಸೀಮೆಎಣ್ಣೆ, ಸಕ್ಕರೆ, ಖಾದ್ಯತೈಲ ಮತ್ತು ಕಾಗದ ಒಂದು ದೃಢಮಟ್ಟದ ತಲಾನೀಡಿಕೆಯನ್ನು ಪಡೆಯುವಂತೆ ಮಾಡುವುದು ಮತ್ತು ಆ ಬಗ್ಗೆ ಅವನಿಗೆ ಖಾತ್ರಿ ಇರುವಂತೆ ಮಾಡುವ ಹಾಗೆ ನೀತಿಯನ್ನು ನಿರ್ವಹಿಸುವುದೇ ಅಧಿಕಾರಿಗಳ ಮುಖ್ಯ ಹಾಗೂ ಅಂತಿಮಗುರಿಯಾಗಿರಬೇಕು. ಇಡೀ ಅರ್ಥವ್ಯವಸ್ಥೆಯಲ್ಲಿ ಒಂದು ಸಾಮಾನ್ಯ ದರದಲ್ಲಿ ಕನಿಷ್ಠ ನೀಡಿಕೆಯ ಖಾತ್ರಿಗಾಗಿ, ಒಂದು ಸಾಮಾಜಿಕ ಸಂಗ್ರಹಕ್ಕೆ ದಾಸ್ತಾನನ್ನು ದೊರಕಿಸಿ ಕೊಡುವುದು ಪ್ರತಿಯೊಂದು ಸರ್ಕಾರದ, ಕೈಗಾರಿಕೆಯ ಮತ್ತು ಕೃಷಿಯ ಜವಾಬ್ದಾರಿಯಾಗಬೇಕು.

## ದಕ್ಷ ಸಾರ್ವಜನಿಕ ವಿತರಣೆಯ ಏಕೈಕ ವ್ಯವಸ್ಥೆ

ಮೇಲಿನ ವಿವರಣೆಯು, ದಕ್ಷವಾದ ಮತ್ತು ಪ್ರಾಮಾಣಿಕವಾದ ಆಡಳಿತ ಯಂತ್ರವು, ಸಾರ್ವಜನಿಕ ವಿತರಣೆ ವ್ಯವಸ್ಥೆಯ ದಕ್ಷತೆಗಾಗಿ ಮಹತ್ವವಾದವು ಎಂಬುದನ್ನು ತೋರಿಸುತ್ತದೆ. ಇಂತಹ

ಒಂದು ಆಡಳಿತ ವ್ಯವಸ್ಥೆಯ ಗೈರುಹಾಜರಿಯಲ್ಲಿ ಅಗತ್ಯ ವಸ್ತುಗಳ ಸಾರ್ವಜನಿಕ ವಿತರಣೆಯೂ, ಅನೇಕ ಗಲಿಬಿಲಿ, ಅಸಮ ವಾದ ಹಂಚಿಕೆ ಮತ್ತು ಹೆಚ್ಚಿನ ಬೆಲೆಗಳಲ್ಲಿ ಪರ್ಯವಸಾನ ವಾಗುತ್ತದೆ. ಇವೆಲ್ಲವೂ ಸಾರ್ವಜನಿಕರ ಆಗ್ರಹ, ಅಶಾಂತಿಗೆ ಮಾರ್ಗಮಾಡಿಕೊಡುತ್ತವೆ. ಆಡಳಿತಗಾರರಿಗೆ ವಿತರಣ ವ್ಯವಸ್ಥೆ ಯನ್ನು ಇಡೀ ಅರ್ಥವ್ಯವಸ್ಥೆಯಲ್ಲಿ ಅತ್ಯಂತ ಗಟ್ಟಿಮನಸ್ಸಿನಿಂದ ಜಾರಿಗೆ ತರುವ ಮನಸ್ಸಿಲ್ಲದಿದ್ದರೆ ಮತ್ತು ಆ ಬಗ್ಗೆ ಒಂದು ನಿರ್ಧಾರವಿಲ್ಲದಿದ್ದರೆ ಅದನ್ನು ಕಾರ್ಯಗತ ಮಾಡುವುದು ಬಹಳ ಕಠಿಣವಾಗುತ್ತದೆ. ನಮ್ಮ ದೇಶದಲ್ಲಿನ ಇತ್ತೀಚಿನ ಕೆಲವು ಘಟನೆಗಳು ಈ ಮಾತಿಗೆ ಸಾಕ್ಷಿಯಾಗಿವೆ. ಸರ್ಕಾರವು ನಾವು ಮೇಲೆ ಸೂಚಿಸಿರುವ ರೀತಿಯ ದಕ್ಷವಾದ ಸಾರ್ವಜನಿಕ ವಿತರಣೆ ವ್ಯವಸ್ಥೆಯನ್ನು ಜಾರಿಗೆ ತರುವ ಜವಾಬ್ದಾರಿಯನ್ನು ನಿರ್ವಹಿಸು ವುದಕ್ಕೆ ಅಶಕ್ತವಾಗಿದ್ದರೆ ಅದು ಒಂದು ಮಿತಯೋಜನೆಯಾದ ಎಲ್ಲ ಕಡೆ ನ್ಯಾಯಬೆಲೆ ಅಂಗಡಿಗಳನ್ನು ಸ್ಥಾಪಿಸುವ ಮತ್ತು ಅವುಗಳ ಮೂಲಕ ದೇಶದ ಅತ್ಯಂತ ದುರ್ಬಲವರ್ಗದ ಜನಕ್ಕೆ ಅಗತ್ಯ ವಸ್ತುಗಳನ್ನು ನ್ಯಾಯಬೆಲೆಗೆ ದೊರಕಿಸಿಕೊಡುವ ಯೋಜನೆಯನ್ನು ಕಾರ್ಯಗತ ಮಾಡಬೇಕು. ದೇಶದ ಉಳಿದ ವರ್ಗದ ಜನರು ತಮ್ಮ ಅಗತ್ಯತೆಗಳನ್ನು ಬಹಿರಂಗ ಮಾರುಕಟ್ಟೆಯಲ್ಲಿ ಕೊಳ್ಳುವಂತಿರಬೇಕು.

ಕೈಗಾರಿಕೆಗಳಿಗೆ ಅಗತ್ಯವಾದ ಕೃಷಿಯೇತರ ಸರಕುಗಳ ವಿಷಯದಲ್ಲಿ, ವಾಣಿಜ್ಯ ಮತ್ತು ಕೈಗಾರಿಕಾರಂಗದಲ್ಲಿ ಇರುವ ಸಂಗ್ರಹದ ಬಗ್ಗೆ ಮಾಹಿತಿಯನ್ನು ಕಲೆಹಾಕುವ ಮತ್ತು ಸಂಬಂಧಪಟ್ಟವರಿಗೆ ತಿಳಿಸುವ ಕಾರ್ಯ ನಡೆಯಬೇಕು. ಈ

ಕಾರ್ಯಗಳ ಹೊಣೆಯನ್ನು ಹೊರುವ ಸಂಸ್ಥೆಯ ಉದ್ದೇಶಗಳಲ್ಲಿ ಕಾರ್ಖಾನೆಗಳ ನಡುವೆ ಯೋಗ್ಯವಾದ ವಾಣಿಜ್ಯ-ಸಾಲ ಹೊಂದಾಣಿಕೆಯಾಗುವಂತೆ ಮಾಡುವ ಉದ್ದೇಶವು ಮಹತ್ವದ್ದಾಗಿರಬೇಕು. ಹೀಗೆ ಮಾಡುವುದರಿಂದ ಇಡೀ ಕೈಗಾರಿಕೆಯಲ್ಲಿನ ದಾಸ್ತಾನು ಮತ್ತು ಉತ್ಪನ್ನ ನಡುವಣ ಪ್ರಮಾಣವು ಆದರ್ಶಮಟ್ಟವನ್ನು ತಲಪುವುದು ಸಾಧ್ಯವಾಗುತ್ತದೆ ಚಟುವಟಿಕೆ ವಿಶ್ಲೇಷಣೆಯ ತಂತ್ರಗಳ ಮೂಲಕ ಕಲೆಹಾಕಿದ ಮಾಹಿತಿಯು ಪ್ರತಿಯೊಂದು ಅವಧಿಯಲ್ಲೂ ಲಭ್ಯವಾಗುವುದು ಸಾಧ್ಯವಾದರೆ ಸಾಗಣೆ ವೆಚ್ಚವನ್ನು ಕನಿಷ್ಠಮಟ್ಟದಲ್ಲಿ ಇಡುವುದು ಮತ್ತು ಉತ್ಪನ್ನ ಪ್ರವಹಿಸುವಿಕೆಯನ್ನು ಗರಿಷ್ಠಮಟ್ಟಕ್ಕೆ ಒಯ್ಯುವುದು ಸಾಧ್ಯವಾಗುತ್ತದೆ. ಇಂತಹ ಮಾಹಿತಿಯು ಸಾಲಯೋಜನೆಗೆ ಸಹ ಅತ್ಯಂತ ಮಹತ್ವದ್ದಾಗುತ್ತದೆ.

ವಿವಿಧ ಪ್ರದೇಶಗಳಲ್ಲಿ ವಿವಿಧ ರೀತಿಯ ವಿರಳ ಸರಕುಗಳು ಯೋಗ್ಯ ಬೆಲೆಗಳಲ್ಲಿ ವಾಸ್ತವವಾಗಿ ಮಾರಾಟವಾಗುವುದಕ್ಕೆ ರಾಷ್ಟ್ರೀಯ ಮಟ್ಟದಲ್ಲಿ "ಬೆಲೆಜಾಗರೂಕ ಬೋರ್ಡ್"ಗಳನ್ನು ಸ್ಥಾಪಿಸಬೇಕು. ಈ ಬೋರ್ಡ್‌ಗಳು ಬೆಲೆಗಳನ್ನು ಖಚಿತಪಡಿಸಿಕೊಳ್ಳುವುದರ ಜೊತೆಗೆ ಉತ್ತಮ ಗುಣಮಟ್ಟದ ಸರಕುಗಳು ಸರಬರಾಜು ಆಗುತ್ತಿರುವುದನ್ನು ಖಾತ್ರಿ ಮಾಡಿಕೊಳ್ಳಬೇಕು. ಸಾಕಷ್ಟು ಪ್ರಮಾಣದ ಮಾಹಿತಿ ಪ್ರಚಾರಗಳು ನಡೆಯುತ್ತಿದ್ದು, ಸಾರ್ವಜನಿಕರು ತಮ್ಮ ದೂರುಗಳನ್ನು ಸಲ್ಲಿಸುವ ಮತ್ತು ಮನವಿಗಳಿಗೆ ಪರಿಹಾರ ದೊರಕಿಸಿಕೊಳ್ಳುವ ಸಾಧ್ಯತೆ ಇರಬೇಕು. ಮೂಲಾವಶ್ಯಕ ವಸ್ತುಗಳ ಬಗ್ಗೆ ಅನುಭೋಗಿಗಳು ಬೆಲೆ ಏರಿಕೆ ತಡೆತ ಚಳುವಳಿಯನ್ನು ಬಲಪಡಿಸುವುದು ಅಗತ್ಯ.

ಲಾಭಕೋರತನ, ಕಲಬೆರಕೆ ಮುಂತಾದ ಅಪರಾಧಗಳಿಗೆ ಅತ್ಯಂತ ಕಠಿಣವಾದ ಶಿಕ್ಷೆಗಳನ್ನು ವಿಧಿಸಬೇಕು.

## ಆಹಾರದ ಉತ್ಪನ್ನ

ಆಹಾರವು ಕೂಲಿ ಸರಕುಗಳಲ್ಲಿ ಅತ್ಯಂತ ಮುಖ್ಯವಾದುದ್ದು. ಅತ್ಯಂತ ಹೆಚ್ಚಿನ ಕಾರ್ಮಿಕರಿಗೆ ಇದೇ ಅಲ್ಪಾವಧಿಯ ಕೂಲಿ ಸರಕಾದ್ದರಿಂದ ಪ್ರತಿಯೊಂದು ಬೇಸಾಯ ಅವಧಿಯಲ್ಲೂ ಆಹಾರದ ಉತ್ಪನ್ನವನ್ನು ಹೆಚ್ಚಿಸಲು ಅತ್ಯಂತ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಬೇಕು. ದೀರ್ಘಾವಧಿ ಯೋಜನೆಯ ತಂತ್ರವು ಪ್ರತಿಯೊಂದು ಬೇಸಾಯ ಅವಧಿಯಲ್ಲೂ ಆಹಾರವನ್ನು ಉತ್ಪಾದಿಸುವ ದಕ್ಷತೆಯ ದರವನ್ನು ಹೆಚ್ಚಿಸಬೇಕು. ಯುದ್ಧಾವಧಿಯ "ಹೆಚ್ಚು ಆಹಾರವನ್ನು ಬೆಳೆಯಿರಿ" ಎಂಬ ಪ್ರಚಾರದ ಅನುಭವದಿಂದ ನಾವು ಅನೇಕ ಪಾಠಗಳನ್ನು ಕಲಿಯಬಹುದಾಗಿದೆ. ಉಳಲು ಯೋಗ್ಯವಾಗಿರುವ ಆದರೆ ಇನ್ನೂ ಉತ್ತಿಲ್ಲದಿರುವ ಜಮೀನನ್ನು ಉಪಯೋಗಕ್ಕೆ ಹಾಕಬೇಕು. ಅಲ್ಪಾವಧಿಯ ಬಿತ್ತನೆ ಬೀಜಗಳನ್ನು ಎಚ್ಚರಿಕೆಯಿಂದ ಆಯ್ದು ಕೊಳ್ಳುವುದರ ಮೂಲಕ ಕೆಲವು ಪ್ರದೇಶಗಳಲ್ಲಿ ಹಲವು ಬೆಳೆಗಳನ್ನು ಬೆಳೆಯುವುದು ಸಾಧ್ಯವಾಗುತ್ತದೆ. ಜಿನಗು ಬಾವಿಗಳು ಮತ್ತು ಕೊಳವೆ ಬಾವಿಗಳನ್ನು ತೆಗೆಯುವುದರ ಮೂಲಕ ಅಂತರ್ಜಲ ಸಂಪತ್ತನ್ನು ಸಾಧ್ಯವಾದಷ್ಟು ಬಳಸಿಕೊಳ್ಳಬೇಕು. ಬಹಳ ಬೇಗ ಅನೇಕ ರೀತಿಯ ಸಣ್ಣ ಪ್ರಮಾಣದ ನೀರಾವರಿ ಸೌಲಭ್ಯಗಳನ್ನು ದೊರಕಿಸಿಕೊಳ್ಳಬೇಕು. ದೀರ್ಘಾವಧಿಯಲ್ಲಿ ನೀರಾವರಿ ಯೋಜನೆಗಳನ್ನು ಕಾರ್ಯಗತ ಮಾಡಿ ಜಮೀನುಗಳಿಗೆ ನೀರನ್ನು ಒದಗಿಸಿಕೊಡಬೇಕು. ಎರಡು ಭಾಗಗಳಲ್ಲಿ

ನೀರಾವರಿಯನ್ನು ದೊರಕಿಸಿಕೊಡುವ ಕಾರ್ಯ ಸಂಪೂರ್ಣ ಗೊಳ್ಳಬೇಕು. ಕೊನೆಯಪಕ್ಷ ನೀರಾವರಿ ಸೌಲಭ್ಯವಿರುವ ಜಮೀನಿನಲ್ಲಿ ಶೇ. 50ರಷ್ಟನ್ನಾದರೂ ಅನೇಕ ಬೆಳೆಗಳನ್ನು ತೆಗೆಯುವ ಜಮೀನುಗಳಾಗುವಂತೆ ಮಾಡಬೇಕು. ನೀರಿನ ಮೇಲ್ವಿಚಾರಣೆ ಮತ್ತು ರಾಸಾಯನಿಕ ಗೊಬ್ಬರಗಳ ಪ್ರೋತ್ಸೈಕೆ ಈ ದಿಶೆಯಲ್ಲಿ ಬಹುಮಟ್ಟಿಗೆ ಸಹಾಯಕವಾಗಬಲ್ಲವು. ಒಣ ಮೇವನ್ನು ಅಲ್ಪಾವಧಿ ಬೆಳೆಯಾಗಿ ಮಾಡುವುದರಿಂದ ಹುಲ್ಲು ಬೆಳೆಯ ಜಮೀನು ವಿಮೋಚನೆಗೊಳ್ಳುವುದಷ್ಟೆ ಅಲ್ಲದೆ ಜಾನುವಾರುಗಳಿಗೆ ಕಡಮೆ ವೆಚ್ಚದ ಪುಷ್ಟಿಕರ ಆಹಾರವನ್ನು ಒದಗಿಸುತ್ತದೆ. ಕೃಷಿ ಅವಧಿಯಲ್ಲಿನ ಉತ್ಪಾದನೆಯನ್ನು ಗರಿಷ್ಠ ಮಟ್ಟಕ್ಕೆ ಹೆಚ್ಚಿಸುವುದಕ್ಕೆ ನಿಶ್ಚಿತವಾಗಿ ಮಳೆ ಬರುವ ಪ್ರದೇಶಗಳು ಮತ್ತು ನೀರಾವರಿ ಸೌಲಭ್ಯವಿರುವ ಪ್ರದೇಶಗಳಲ್ಲಿ ಉತ್ಪಾದನೆಗೆ ಬೇಕಾದ ಆಧಾನಗಳ ಮೇಲೆ ಅತ್ಯಂತ ಹೆಚ್ಚಿನ ಗಮನವನ್ನು ಕೊಡುವುದು ಅಗತ್ಯವಾಗುತ್ತದೆ. ಮಳೆ ಅನಿಶ್ಚಿತವಾಗಿರುವ ಅಥವಾ ಬಹಳ ಕಡಮೆ ಇರುವ ಪ್ರದೇಶಗಳಲ್ಲಿ ಕೆಲವು ಸೂಕ್ತವಾದ ಮತ್ತು ಹೆಚ್ಚಿಗೆ ಇಳುವರಿ ಕೊಡುವ ಬೀಜಗಳನ್ನು ಎಚ್ಚರಿಕೆಯಿಂದ ಆಯ್ದು ಉಪಯೋಗಿಸಬೇಕಾಗುತ್ತದೆ. ಪ್ರಯೋಗ ಶಾಲೆಯಲ್ಲಿ ಕೆಲವೊಂದು ಅಧಿಕ ಇಳುವರಿ ಬೀಜಗಳು ಪ್ರತಿಫಲದ ದೃಷ್ಟಿಯಿಂದ ಅತ್ಯಂತ ದಕ್ಷವಾಗಿ ಕಂಡುಬಂದರೂ ಅವು ಎಲ್ಲ ಪ್ರದೇಶಗಳಲ್ಲೂ ಅಧಿಕ ಇಳುವರಿಯನ್ನು ತರುತ್ತವೆಂಬುದರ ಬಗ್ಗೆ ಖಾತ್ರಿಯಿಲ್ಲ. ನಿಯಂತ್ರಿತ ನೀರಾವರಿ ಇರುವ ಕಡೆ ಅವು ಸಿದ್ಧಿಯನ್ನು ಪಡೆಯಬಹುದು. ಈ ಇಳುವರಿ ಬೀಜಗಳು ಅತ್ಯಂತ ಹೆಚ್ಚಿನ ರಾಸಾಯನಿಕ ಗೊಬ್ಬರ,

ನೀರನ್ನು ಒದಗಿಸುವುದರಲ್ಲಿ ಸರಿಯಾದ ಮೇಲ್ವಿಚಾರಣೆ ಇರುವಾಗ ಮಾತ್ರ ಅಧಿಕ ಇಳುವರಿಯನ್ನು ಕೊಡುತ್ತವೆ. ಆದರೆ ಸಣ್ಣ ಹಾಗು ಮಧ್ಯಮ ಪ್ರಮಾಣದ ರೈತರಿಗೆ ಈ ರೀತಿ ಸೌಲಭ್ಯ ಗಳಿಲ್ಲ. ಸರ್ಕಾರ ಅನೇಕ ರೀತಿಯ ಸಹಾಯಧನದ ನೆರವನ್ನು ಇಂತಹ ರೈತರಿಗೆ ದೊರಕಿಸಿ ಕೊಡಬೇಕಾದ ಪರಿಸ್ಥಿತಿ ಬರುತ್ತದೆ. ಆದ್ದರಿಂದ ಅಧಿಕ ಇಳುವರಿ ಇರುವ ಪ್ರದೇಶವನ್ನು ವಿಸ್ತರಿಸಿ, ಆಹಾರದ ಉತ್ಪನ್ನವನ್ನು ವೃದ್ಧಿಸಿಕೊಳ್ಳುವುದಕ್ಕೆ ಅಗತ್ಯ ವಾಗಿರುವ ವಿಷಯವೆಂದರೆ, ಪ್ರಾದೇಶಿಕ ಸಂಶೋಧನಾ ಕೇಂದ್ರ ಗಳು ಹೊಸರೀತಿಯ ಬಿತ್ತನೆ ಬೀಜಗಳನ್ನು ಕಂಡುಹಿಡಿ ಯುವ ಪ್ರಯತ್ನದಲ್ಲಿ ತೊಡಗಬೇಕು. ಇಂತಹ ಬೀಜಗಳಿಗೆ ಸ್ವಲ್ಪಪ್ರಮಾಣದ ರಾಸಾಯನಿಕ ಗೊಬ್ಬರಗಳೆ ಅಧಿಕ ಇಳುವರಿಗೆ ಸಾಕಾಗುವಂತಿರಬೇಕು. ಹೀಗೆ ಮಾಡಿದಾಗ ಮಾತ್ರ ಅತ್ಯಂತ ಹೆಚ್ಚಿನ ಸಂಖ್ಯೆಯ ಕೃಷಿಕರು ಇಂತಹ ಬೀಜಗಳನ್ನು ಬಳಸಿಕೊಂಡು ಅಧಿಕ ಉತ್ಪನ್ನವನ್ನು ತೆಗೆಯುವುದು ಸಾಧ್ಯ. ನಮ್ಮ ವಿಸ್ತಾರಣಾ ಸಂಸ್ಥೆಗಳು, ರೈತರು ಅನೇಕ ಹೊಸ ಭಾವನೆ ಗಳನ್ನು ಒಪ್ಪಿಕೊಳ್ಳುವಂತೆ ಮಾಡಬೇಕಾಗಿದೆ. ಅವುಗಳಲ್ಲಿ ಮುಖ್ಯವಾದುವೆಂದರೆ ಶ್ರಮವನ್ನು ಉಪಯೋಗಿಸಿಕೊಂಡು ಜಮೀನನ್ನು ಸಮಮಾಡುವುದು, ಕಂಪೋಸ್ಟ್ ಗೊಬ್ಬರಗಳ ಉಪಯೋಗ, ಆಳವಾಗಿ ಉಳುವುದು, ಎಚ್ಚರಿಕೆಯಿಂದ ನೆಡು ವುದು ಮುಂತಾದವು.

ಈ ಪ್ರಯತ್ನಗಳ ಜೊತೆಯಲ್ಲಿಯೆ ರಾಸಾಯನಿಕ ಗೊಬ್ಬರಗಳು, ಕೀಟನಾಶಕಗಳು, ಕೃಷಿಯಂತ್ರ ಸಾಮಗ್ರಿಗಳು ಮುಂತಾದುವು ಗಳ ಉತ್ಪಾದನ ಸಾಮರ್ಥ್ಯವನ್ನು ವಿಸ್ತರಿಸುವುದಕ್ಕೆ

ತೀವ್ರವಾದ ಗಮನನೀಡುವುದು ಅಗತ್ಯ. ಈ ಕ್ರಮಗಳು ವೇಗವಾಗಿ ಬೆಳೆಯುವುದನ್ನು ಸಾಧ್ಯಮಾಡಿ ನಾನಾ ಘಟ್ಟಗಳಲ್ಲಿ ಆಗಬಹುದಾದ ಅಪವ್ಯಯಗಳನ್ನು ತಪ್ಪಿಸುತ್ತವೆ. ಸಂಗ್ರಹ ಮತ್ತು ಶುದ್ಧೀಕರಣದ ಸೌಲಭ್ಯಗಳಲ್ಲಿ ಸಹ ಅನೇಕ ಸುಧಾರಣೆಗಳನ್ನು ತರಬೇಕಾಗಿದೆ. ಜಲವನ್ನು ಸಂಗ್ರಹಿಸುವುದು, ಜಮೀನಿನಲ್ಲಿ ಗೊಬ್ಬರವನ್ನು ಸಂಗ್ರಹಿಸುವುದು ಮತ್ತು ಜಮೀನಿನ ಫಲವತ್ತತೆಯನ್ನು ಕಾಪಾಡುವ ಕ್ರಮಗಳ ಬಗ್ಗೆ ರೈತರಿಗೆ ವೈಜ್ಞಾನಿಕ ಪದ್ಧತಿಗಳ ಅನುಸರಣೆಯನ್ನು ತಿಳಿಸಿ ಕೊಡಬೇಕಾಗಿದೆ.

ಕೃಷಿ ಉತ್ಪನ್ನದ ವಿಸ್ತರಣೆಯ ವಿಧಾನದಲ್ಲಿ, ಉತ್ಪನ್ನ ದಕ್ಷತೆ ಹಾಳಾಗದಂತೆ ಸಾಧ್ಯವಾದಷ್ಟು ಹೆಚ್ಚಿನ ಪ್ರಮಾಣದ ಕಾರ್ಮಿಕರು, ಕೃಷಿಯಲ್ಲಿ ತೊಡಗುವಂತೆ ಮಾಡಬೇಕು. ಗ್ರಾಮೀಣ ಯೋಜನೆಗಳೆಲ್ಲವೂ ಕೃಷಿಉತ್ಪನ್ನದ ಹೆಚ್ಚಳವಾಗು ವಂತೆ ರೂಪಿತವಾಗಬೇಕು. ತೈಲಬಿಕ್ಕಟ್ಟು ಕೃಷಿವಿಧಾನ, ಆಹಾರ ವಸ್ತುಗಳ ಶುದ್ಧೀಕರಣ, ಅವುಗಳ ಸಾಗಣೆಯ ವ್ಯವಸ್ಥೆಯಮೇಲೆ ತನ್ನ ಪರಿಣಾಮವನ್ನು ಹೊಂದಿದೆ. ಆದ್ದರಿಂದ ಕೃಷಿ ಮತ್ತು ಸಂಗೋಪನೆ ಉತ್ಪನ್ನಗಳ ಉಪಪದಾರ್ಥ ಗಳನ್ನು ಮತ್ತೆ ಮತ್ತೆ ಉಪಯೋಗಿಸುವ ಬಗ್ಗೆ ತುರ್ತಾಗಿ ಆಲೋಚಿಸಬೇಕಾಗಿದೆ. ಈ ಸಂದರ್ಭದಲ್ಲಿ ಮತ್ತೂ ಒಂದು ವಿಷಯವನ್ನು ನಾವು ಗ್ರಹಿಸಬಹುದು. ಪಟ್ಟಣಪ್ರದೇಶ ಗಳಲ್ಲಿನ ಕೈಗಾರಿಕಾ ಯೋಜನೆಯ ತಾರ್ಕಿಕತೆಯು ಸಾಮಾಜಿಕ ಅರ್ಥವ್ಯವಸ್ಥೆಯ ದೃಷ್ಟಿಕೋನದಿಂದ ಬದಲಾವಣೆಯನ್ನನು ಭವಿಸಬೇಕಾಗುತ್ತದೆ. ತೈಲ ಮತ್ತು ತೈಲವನ್ನಾಧಾರಿಸಿರುವ

ಕೈಗಾರಿಕೆಗಳಲ್ಲಿ ಮತ್ತು ಆಮದನ್ನು ಆಧರಿಸಿರುವ ಉತ್ಪನ್ನಗಳಲ್ಲಿ ತೈಲದ ಉಪಯೋಗವನ್ನು ಮಿತವ್ಯಯಗೊಳಿಸಲು ಕೈಗಾರಿಕೆಗಳನ್ನು ಸ್ಥಾಪಿಸುವ ಜಾಗ ಮತ್ತು ಉತ್ಪಾದನೆಯ ವಿಧಾನಗಳ ಬಗ್ಗೆ ಮರುಆಲೋಚನೆ ಮಾಡಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕಾಂಪೋಸ್ಟ್, ಹಸಿರುಗೊಬ್ಬರ, ಗೊಬ್ಬರದಿಂದ ಗ್ಯಾಸ್ ಉತ್ಪಾದನೆಯ ಕೈಗಾರಿಕೆಗಳು ಅತ್ಯಂತ ಹೆಚ್ಚಿನ ಪ್ರಾಧಾನ್ಯತೆಯನ್ನು ಪಡೆದುಕೊಳ್ಳುತ್ತವೆ. ವನಪ್ರದೇಶದ ಅಭಿವೃದ್ಧಿ ಸಹ ಅಧಿಕ ಪ್ರಾಧಾನ್ಯತೆಯನ್ನು ಪಡೆದುಕೊಳ್ಳುತ್ತದೆ. ಕೃಷಿವಸ್ತುಗಳ ವಿರಳತೆಯ ಪರಿಣಾಮವು ಉದ್ಯೋಗ, ರಫ್ತು ಮುಂತಾದ ಕ್ಷೇತ್ರಗಳ ಮೇಲೆ ತನ್ನ ತೀವ್ರವಾದ ಪರಿಣಾಮವನ್ನು ಹೊಂದಿರುವುದು ಸ್ಪಷ್ಟವಾಗಿದೆ. ಈ ಕಾರಣದಿಂದ ಅರ್ಥವ್ಯವಸ್ಥೆಯು ಎಷ್ಟು ಹೀರಿಕೊಳ್ಳಬಲ್ಲದೋ ಅಷ್ಟು ಪ್ರಮಾಣದ ಅಧಿಕ ವೆಚ್ಚವನ್ನು ನೀರಾವರಿ, ಪ್ರವಾಹ ನಿಯಂತ್ರಣೆ, ಭೂಸಾರ ನಿಯಂತ್ರಣೆ, ರಾಸಾಯನಿಕ ಗೊಬ್ಬರಗಳ ಉತ್ಪಾದನ ವಿಸ್ತರಣೆ, ಅರಣ್ಯೀಕರಣ, ಜಾನುವಾರು ಸಂಗೋಪನೆ ಮುಂತಾದ ಅಭಿವೃದ್ಧಿ ಕಾರ್ಯಗಳ ಮೇಲೆ ಮಾಡಬೇಕಾಗಿರುವುದು ಅತ್ಯಾವಶ್ಯಕ. 5ನೇ ಪಂಚವಾರ್ಷಿಕ ಯೋಜನೆಯ ಕರಡಿನಲ್ಲಿ ಸೂಚಿಸಿರುವಂತೆ ಆಹಾರರಂಗವು (ಇದರಿಂದಾಗಿ ಕೃಷಿರಂಗ ಸಹ) ಅಂತರ ಕೈಗಾರಿಕಾ ಸಂಬಂಧಗಳ ಮಾತೃಕೆಯಲ್ಲಿ (Matrix) ಒಂದು ಸ್ವತಂತ್ರವಾದ ಅಧೀನ ವ್ಯವಸ್ಥೆ. ಆದ್ದರಿಂದ ಇಲ್ಲಿನ ಬೆಳವಣಿಗೆಯ ಗುರಿಗಳು ಮೂರು ಮುಖ್ಯ ಬೇಡಿಕೆಗಳಾದ, ಸಾಕಷ್ಟು ಪ್ರಮಾಣದ ಆಹಾರನೀಡಿಕೆ, ಉದ್ಯೋಗಹೆಚ್ಚಳ ಮತ್ತು ರಫ್ತು ಹೆಚ್ಚಳಗಳನ್ನು ಪೂರೈಸಲು ಮಾತೃಕೆ ಸ್ವತಂತ್ರವಾಗಿ ನಿಗಧಿಯಾಗಬೇಕು. ಈ ಗುರಿಗಳನ್ನು

ಮುಟ್ಟಲು ರಾಷ್ಟ್ರದ ಉಳಿತಾಯಗಳಲ್ಲಿ ಈ ದಿಕ್ಕಿನ ಹೂಡಿಕೆಗೆ ಪ್ರಾಧಾನ್ಯತೆ ಇರಬೇಕು. 5ನೆಯ ಯೋಜನೆಯಲ್ಲಿ ಕೃಷಿ ರಂಗದ ಬಂಡವಾಳ--ಉತ್ಪಾದನೆ ನಡುವಣ ಪ್ರಮಾಣವು 2·38 ಆಗಿದೆ. ಗಣಿ ಮತ್ತು ಕೈಗಾರಿಕಾ ಉತ್ಪಾದನ ರಂಗದಲ್ಲಿ ಈ ಪ್ರಮಾಣವು 3·44 ಆಗಿದೆ. ಕೃಷಿರಂಗದಲ್ಲಿನ ಉತ್ಪಾದನ ವಿಸ್ತರಣೆಗೆ ಸರಿಯಾದ ಗುಣಮಟ್ಟವುಳ್ಳ ಪ್ರಾಜೆಕ್ಟುಗಳ ಮೇಲೆ ಇನ್ನೂ ಹೆಚ್ಚಿನ ವೆಚ್ಚವನ್ನು ಮಾಡಿದರೆ ಈ ರಂಗದಲ್ಲಿ ನಿರೀಕ್ಷಿಸಲಾಗಿರುವ 2.38ರ ಪ್ರಮಾಣವನ್ನು ಸಾಧಿಸುವುದಷ್ಟೆ ಅಲ್ಲದೆ ಅದನ್ನು ದಾಟಿ ಆಚೆಗೆ ಹೋಗಬಹುದು ಸಹ.

### ಕೈಗಾರಿಕಾ ಉತ್ಪನ್ನ

ಕೈಗಾರಿಕಾ ಉತ್ಪನದಲ್ಲಿ ಇರುವ ಬಿಕ್ಕಟನ್ನು ಪರಿಹರಿಸುವ ಬಗ್ಗೆ ಈಗ ನಾವು ಗಮನವನ್ನು ಕೊಡುತ್ತೇವೆ. 1960-72ರ ಅವಧಿಯ ಕೈಗಾರಿಕಾ ಉತ್ಪನ್ನ ಸೂಚ್ಯಂಕಗಳ ಕಡೆ ಒಮ್ಮೆ ನಾವು ಗಮನಹರಿಸಿದರೆ, 1960–65ರಲ್ಲಿ ಸರಾಸರಿ ವಾರ್ಷಿಕ ಉತ್ಪನ್ನ ಹೆಚ್ಚಳವು ಶೇ. 9 ಇದ್ದುದು 1965-72ರ ನಡುವೆ ಅದು ಶೇ. 3·7ಕ್ಕೆ ಇಳಿದಿರುವುದು ಗೋಚರವಾಗುತ್ತದೆ. ಈ ಇಳಿತವು ಸಿಮೆಂಟ್, ಉಕ್ಕು, ಯಂತ್ರಸಾಮಗ್ರಿಗಳ ಕೈಗಾರಿಕೆ ಹಾಗೂ ಸಾರಿಗೆ ವ್ಯವಸ್ಥೆಯನ್ನು ನಡೆಸಲು ಬೇಕಾಗಿರುವ ಕಲ್ಲಿದ್ದಲು, · ವಾಹನಗಳು, ವಿದ್ಯುಚ್ಛಕ್ತಿ ಮುಂತಾದ ಕೈಗಾರಿಕೆಗಳು ಮತ್ತು ಅನುಭೋಗಿ ಸರಕುಗಳ ಕೈಗಾರಿಕೆಗಳಾದ ಹತ್ತಿಬಟ್ಟೆ, ವನಸ್ಪತಿ, ಸಕ್ಕರೆ, ಸಿಗರೇಟ್ ಕೈಗಾರಿಕೆಗಳು ಮತ್ತು ರಫ್ತು ಕೈಗಾರಿಕೆಗಳಾದ ಟೀ ಮತ್ತು ಸೆಣಬು ಕೈಗಾರಿಕೆಗಳಲ್ಲಿ ತೀವ್ರವಾಗಿರುವುದು ಕಂಡುಬರುತ್ತದೆ.

ಅನೇಕ ಕೈಗಾರಿಕೆಗಳಲ್ಲಿ ಉತ್ಪಾದನ ಸಾಮರ್ಥ್ಯ ಹೆಚ್ಚಳವು ಸ್ವತಂತ್ರವಾಗಿ ನಡೆಯುತ್ತಿರುವುದರಿಂದ ಬೆಳವಣಿಗೆಯು ದರ ಇಳಿಮುಖವಾಗುವುದರ ಜೊತೆಗೆ ಉತ್ಪನ್ನ ಸಾಮರ್ಥ್ಯವನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳದಿರುವ ಪರಿಸ್ಥಿತಿ ಇದೆ. ಇಡೀ ಕೈಗಾರಿಕಾ ರಂಗದಲ್ಲಿ 1/3 ಭಾಗದಷ್ಟು ಉತ್ಪಾದನ ಸಾಮರ್ಥ್ಯ ಉಪಯೋಗವಾಗದೆ ಉಳಿದಿದೆ ಎಂದು ಅಂದಾಜು ಮಾಡಲಾಗಿದೆ. ಈ ಪರಿಸ್ಥಿತಿಗೆ ವಿಪರ್ಯಾಸವಾಗುವ ರೀತಿಯಲ್ಲಿ 1965–66 ಮತ್ತು 1972–73ರ ನಡುವಣ ಅವಧಿಯಲ್ಲಿ ಕೈಗಾರಿಕಾ ವಸ್ತುಗಳ ಬೆಲೆಗಳು ಶೇ.65ರಷ್ಟು ಹೆಚ್ಚಾಗಿವೆ. ಈ ಬೆಲೆಗಳು 1960-61ರ ನಡುವೆ ಶೇ. 24ರಷ್ಟು ಮತ್ತು 1960-61 ಮತ್ತು 1965-66ರ ನಡುವೆ ಶೇ. 20ರಷ್ಟು ಮಾತ್ರ ಹೆಚ್ಚಾಗಿದ್ದವು ಅಷ್ಟೆ.

1965-66ರಲ್ಲಿ ಪ್ರಮುಖ ಕೈಗಾರಿಗಳಲ್ಲಿ ಕಾಣಿಸಿಕೊಂಡ ಕೈಗಾರಿಕಾ ಹಿಂಜರಿತ ಇನ್ನೂ ಸಹ ಸುಧಾರಿತವಾಗಿಲ್ಲ. ಅಂತರ ಕೈಗಾರಿಕಾ ಸಂಬಂಧದ ಮಾತೃಕೆಯನ್ನು ಕೂಲಂಕಷವಾಗಿ ವಿಮರ್ಶಿಸುವುದರ ಮೂಲಕ ಮಾತ್ರ ಈ ಹಿಂಜರಿತದ ಹಿಂದೆ ಅಡಗಿರುವ ಅಂಶಗಳನ್ನು ಅರಿಯಬಹುದು ಎಂಬ ವಿಷಯವನ್ನು ನಿಧಾನವಾಗಿ ಈಗತಾನೆ ಗ್ರಹಿಸಲಾಗಿದೆ. ಬಂಡವಾಳ ನಿರ್ಮಾಣದ ಮಟ್ಟದಲ್ಲಿ ಸತತ ಸ್ಥಗಿತತೆಯಿಂದಾಗಿ ದೊಡ್ಡ ಪ್ರಮಾಣದ ಇಂಜನಿಯರಿಂಗ್ ಕೈಗಾರಿಕೆಯಲ್ಲಿ ಹೆಚ್ಚಿನ ಭಾಗದ ಬಿಕ್ಕಟ್ಟು ಉಂಟಾಯಿತು ಎಂಬುದರಲ್ಲಿ ಸಂದೇಹವಿಲ್ಲ. ಆದ್ದರಿಂದ, ಬೇಡಿಕೆಯ ಭಾಗಶಃ ಸಮಸ್ಯೆಯು ದೊಡ್ಡ ಪ್ರಮಾಣದ ಕೈಗಾರಿಕೆಯ ಅಭಿವೃದ್ಧಿಗೆ ಅಗತ್ಯವಿರುವ

ದೀರ್ಘಾವಧಿ ಉಳಿತಾಯ ನೀಡಿಕೆಯ ಭಾಗದಲ್ಲೂ ವ್ಯಕ್ತವಾಗು ತ್ತದೆ ಎನ್ನುವುದು ಸ್ಪಷ್ಟ. ಹಿಂದೆ ಸೂಚಿಸಲಾಗಿರುವ ರೀತಿಯ ಹಣ ದುಬ್ಬರರಹಿತ ಉಳಿತಾಯ-ನಿಯೋಜನೆ ಕ್ರಮವು ಕೆಲವೊಂದು ದೊಡ್ಡ ಪ್ರಮಾಣದ ಕೈಗಾರಿಕೆಯಲ್ಲಿ ಬೆಳವಣಿಗೆಯು ಮತ್ತೆ ಆರಂಭವಾಗುವಂತೆ ಮಾಡುವುದರಲ್ಲಿ ಸಹಾಯಕವಾಗಬೇಕು. ಅವರಲ್ಲೂ ಕೂಲಿಸರಕಗಳು ಮತ್ತು ರಫ್ತು ಕೈಗಾರಿಕೆ ರಂಗದಲ್ಲಿನ ಕೈಗಾರಿಕೆಗಳಿಗೆ ಅಗತ್ಯವಿರುವ ಬೆಂಬಲ ಪರಿಸ್ಥಿತಿಗಳನ್ನು ಸೃಷ್ಟಿಸುವ ಹಾಗೂ ಅದಕ್ಕೆ ಅಗತ್ಯವಿರುವ ಉತ್ಪಾದಕ ಸರಕು ಗಳನ್ನು ಉತ್ಪಾದಿಸುವ ಕೈಗಾರಿಕೆಗಳಲ್ಲಿ ಬೆಳವಣಿಗೆ ಮತ್ತೆ ಸುಗಮವಾಗಿ ನಡೆಯುವುದಕ್ಕೆ ನಮ್ಮ ಮೇಲಿನ ಸೂಚನೆಗಳು ಸಹಾಯಕವಾಗಬೇಕು.

ಕೈಗಾರಿಕಾ ಕ್ಷೇತ್ರದ ಕೆಲವೊಂದು ದಿಕ್ಕಿನಲ್ಲಿ ಉತ್ಪಾದನ ದಕ್ಷತೆಯನ್ನು ಸಂಪೂರ್ಣವಾಗಿ ಬಳಸಿಕೊಂಡು, ಹೆಚ್ಚು ಉತ್ಪಾದನ ದಕ್ಷತೆಯನ್ನು ನಿರ್ಮಾಣ ಮಾಡಿಕೊಂಡಿದ್ದರೆ, ಕೈಗಾರಿಕೋತ್ಪನ್ನ ಬೆಲೆಗಳು 1965-66ರ ನಂತರದ ಅವಧಿ ಯಲ್ಲಿ ಇಷ್ಟು ಎತ್ತರಕ್ಕೆ ಏರುತ್ತಿರಲಿಲ್ಲ. ಕಟ್ಟಡ ಸಾಮಗ್ರಿಗಳು ಮತ್ತು ಸಲಕರಣೆಗಳ ಕೈಗಾರಿಕೆಗಳಲ್ಲಿ ವಿಪರೀತ ಪ್ರಮಾಣದಲ್ಲಿ ಉತ್ಪಾದನ ದಕ್ಷತೆ ಉಪಯೋಗವಾಗದೆ ಉಳಿದಿರುವುದು ತೋರಿ ಬರುತ್ತಿದೆ. ಎಂಜನಿಯರಿಂಗ್ ಪದವೀಧರರಲ್ಲಿ ಅಪೂರ್ಣ ಉದ್ಯೋಗ ಸ್ಥಿತಿ ಇರುವಾಗ ತೊಡಕಿರುವ ಕ್ಷೇತ್ರಗಳಲ್ಲಿ ವಿಸ್ತರಣೆ ಯನ್ನು, ದಕ್ಷತೆ ಅಧಿಕವಿರುವ ಕ್ಷೇತ್ರಗಳಿಂದ ನೀಡಿಕೆಯನ್ನು ಸರಿಯಾಗಿಸುವುದರ ಮೂಲಕ ಮಾಡುವುದು ಒಂದು ಸೂಕ್ತ ಪರಿಹಾರವಾಗಲಾರದೆ? ಒಂದಲ್ಲ,ಒಂದು ಕಾರಣದಿಂದಾಗಿ ಇಷ್ಟು ಸುಲಭವಾದ ಪರಿಹಾರವನ್ನು ಕಾರ್ಯಗತ ಮಾಡೇ ಇಲ್ಲ.

ಕೆಲವು ಉತ್ಪನ್ನಗಳ ಸ್ವಭಾವದಲ್ಲಿ ಅವಿಭಾಜಕತೆ ಇರುವುದು ಮತ್ತು ಯಂತ್ರ ನಿರ್ಮಾಣದ ಪದ್ಧತಿಗಳಲ್ಲಿ ವೈವಿಧ್ಯ ಅಂಶಗಳ ತೊಡಕುಗಳಿರುವಂತೆ ಭಾವಿಸಲಾಗಿದೆ ಎಂದು ಕಾಣುತ್ತದೆ. ಹಾಗೆಯೇ ಕೆಲವು ವಿಶೇಷ ಸಲಕರಣೆಗಳು ಮತ್ತು ಸಾಮಗ್ರಿಗಳನ್ನು ಎಷ್ಟು ಆಮದು ಮಾಡಿಕೊಳ್ಳಲು ಸಾಧ್ಯ ಎನ್ನುವುದರಿಂದ ಅಧಿಕ ಉತ್ಪನ್ನವು ಮಿತಗೊಳಿಸಲ್ಪಟ್ಟಿರ ಬಹುದು ಸಹ.

ಉತ್ಪನ್ನದ ಬಗ್ಗೆ ಹಸಿವಿರುವ ಮತ್ತು ಬಂಡವಾಳಕ್ಕೆ ಕೊರತೆ ಯಿರುವ ಯೋಜಿತ ಅರ್ಥವ್ಯವಸ್ಥೆಯಲ್ಲಿ ಇಂಥ ಕಾರಣಗಳು ನಿಜವಾಗಲೂ ಅಡ್ಡಿಯಾಗಬಾರದು. ನಮ್ಮ ಕೈಗಾರಿಕೆಗಳ ಪರಿಸ್ಥಿತಿಯ ಬಗ್ಗೆ, ಒಂದು ಸಮಗ್ರ ಸಮೀಕ್ಷೆ ನಡೆಯಬೇಕು. ಈ ಸಮೀಕ್ಷೆಯು ಅಂತರಕೈಗಾರಿಕಾ ಸಂಬಂಧಗಳ ವಿಭಜಿತ ಮಾತೃಕೆಯ ಮೇಲೆ ಅವಲಂಬಿತವಾಗಬೇಕು. ಈ ಮಾಹಿತಿಯ ಬಗ್ಗೆ ಇರುವ ಕೊರತೆಯನ್ನು ತಕ್ಷಣವೇ ಹೋಗ ಲಾಡಿಸಬೇಕೆಂದು ನಾವು ಸೂಚಿಸುತ್ತೇವೆ. ಇಂತಹ ಒಂದು ಮುಖ್ಯ ಸಮೀಕ್ಷೆಗೆ, ರಾಷ್ಟ್ರದ ಅರ್ಥವಿಜ್ಞಾನಿಗಳು, ಎಂಜನಿ ಯರ್‌ಗಳು ಮತ್ತು ಖಾಸಗೀರಂಗದ ಕೈಗಾರಿಕಾ ಮ್ಯಾನೇಜರ್ ಗಳ ಸೇವೆಗಳನ್ನು ಸಮರ್ಥವಾಗಿ ಬಳಸಿಕೊಳ್ಳಬೇಕು. ಈ ರೀತಿಯ ಸಮೀಕ್ಷೆ ಅತಿ ಮುಖ್ಯ ದಾಸ್ತಾನುಗಳ ವೃದ್ಧಿಗಾಗಿ 'ನಿವ್ವಳ' ಅಗತ್ಯತೆಗಳನ್ನು ಸೂಚಿಸಬಲ್ಲದು. ಅಗತ್ಯ ಆಮದನ್ನು ಯೋಜನ ರೀತಿಯಲ್ಲಿ ನಡೆಯಬಹುದು. ಈ ವಿಧಾನದಲ್ಲೇ, ಉತ್ಪಾದನ ವಿಧಾನವನ್ನು ಮರುಯೋಜಿಸುವ ಮತ್ತು ಸುಧಾರಿಸುವುದರ ಬಗ್ಗೆ ಸಹ ಇದರಿಂದ ಸೂಚನೆಗಳನ್ನು ಪಡೆದುಕೊಳ್ಳಬಹುದು. ಅನಂತರ ಈ ಬಗ್ಗೆ ರಾಷ್ಟ್ರದ ತಾಂತ್ರಿಕ

ಸಂಸ್ಥೆಗಳಲ್ಲಿ, ಪ್ರಯೋಗಾಲಯಗಳಲ್ಲಿರುವ ಮುಖ್ಯ ವಿಜ್ಞಾನಿಗಳ ಪ್ರತಿಭೆಯ ಸೇವೆಯನ್ನು ಇದಕ್ಕಾಗಿ ಬಳಸಿಕೊಳ್ಳಬಹುದು.

ಹಣದುಬ್ಬರದ ವಿರುದ್ಧದ ಹೋರಾಟದಲ್ಲಿ, ಕೆಲವೊಂದು ಕೈಗಾರಿಕೆಗಳಲ್ಲಿನ ಉತ್ಪಾದನೆ ಮತ್ತು ದಕ್ಷತೆಯ ವಿಸ್ತರಣೆಯು ಇತರ ಕೈಗಾರಿಕೆಗಳಿಗಿಂತ ಮುಖ್ಯ. ಆಹಾರವಸ್ತುಗಳು, ಉಪ್ಪು, ಸಕ್ಕರೆ, ಬಟ್ಟೆ, ಬೆಂಕಿಪೊಟ್ಟಣ, ಖಾದ್ಯ ತೈಲ, ಸೀಮೆಎಣ್ಣೆ, ಗೃಹೋಪಯೋಗಿ ಇದ್ದಿಲು, ಅಡಿಗೆ-ಪಾತ್ರೆಗಳು, ಕೆಲವು ಔಷಧಗಳಂತಹ ಮುಖ್ಯ ಕೂಲಿ-ಸರಕುಗಳನ್ನು ಉತ್ಪಾದಿಸುವುದರಲ್ಲಿ ನೇರವಾಗಿ ಮತ್ತು ಪರೋಕ್ಷವಾಗಿ ತೊಡಗಿರುವ ಕೈಗಾರಿಕೆಗಳು ಅತಿ ಮುಖ್ಯವಾದವು. ಹಾಗೆಯೇ ಕಾಗದ ಮತ್ತು ನ್ಯೂಸ್ ಪ್ರಿಂಟ್ ಕೈಗಾರಿಕೆಗಳು ಪ್ರಮಾಣದ ದೃಷ್ಟಿಯಿಂದ ಮುಖ್ಯವಾದವು. ಈ ಕೈಗಾರಿಕೆಗಳೇ ಅಲ್ಲದೆ, ನೀರಾವರಿ ಪ್ರಾಜೆಕ್ಟ್‌ಗಳ ಸೌಲಭ್ಯವನ್ನು ವಿಸ್ತರಿಸುವ ಹಾಗೂ ಹಸಿರುಕ್ರಾಂತಿಯ ಲಾಭಗಳ ವ್ಯಾಪ್ತ ಅನ್ವಯಕ್ಕಾಗಿ ಕಟ್ಟಡ ಉದ್ಯಮ, ಸಲಕರಣೆಗಳು ಕೃಷಿಸಲಕರಣೆಗಳು, ರಾಸಾಯನಿಕ ಗೊಬ್ಬರ ಇತರ ರಾಸಾಯನಿಕಗಳು ಮುಂತಾದ ಕೈಗಾರಿಕೆಗಳಿಗೆ ಅತ್ಯಂತ ಹೆಚ್ಚಿನ ಆದ್ಯತೆಯನ್ನು ನೀಡಬೇಕು. ಮೂರನೆಯ ಆದ್ಯತೆ ದೊರೆಯಬೇಕಾದ ಕೈಗಾರಿಕೆಗಳೆಂದರೆ, ರಫ್ತುಕೈಗಾರಿಕೆಗಳು. ದೊಡ್ಡ ಪ್ಲಾಂಟೇಷನ್ ಉದ್ಯಮ, ಚರ್ಮ, ಪಾದರಕ್ಷೆ ಬಟ್ಟೆಗಿರಣಿಗಳು, ಕಾಡುವಸ್ತುಗಳಿಂದ ಸಿದ್ಧವಸ್ತುಗಳನ್ನು ತಯಾರಿಸುವ ಕಾರ್ಖಾನೆಗಳು, ಲೈಟ್ ಎಂಜಿನಿಯರಿಂಗ್, ಅಗತ್ಯ ತೈಲಗಳ ಉತ್ಪಾದನೆಯನ್ನು ಹೆಚ್ಚಿಸಬೇಕು. ಈ ಕೈಗಾರಿಕೆಗಳಲ್ಲಿ ಹೆಚ್ಚು ಶಿಫ್ಟ್‌ಗಳ ಮೂಲಕ ಉತ್ಪಾದನೆಯನ್ನು ವೃದ್ಧಿಸುವುದು ಅಗತ್ಯ. ಹೀಗೆ ಮಾಡುವುದರಿಂದ ಉದ್ಯೋಗವನ್ನು ಹೆಚ್ಚಿಸಿ,

ಪ್ರತ್ಯಂಶ ವೆಚ್ಚವನ್ನು ಕಡಮೆ ಮಾಡಬಹುದು.... ಈ ಕೈಗಾರಿಕೆಗಳ ಉತ್ಪನ್ನ ವಿಸ್ತರಣೆ ಹೆಚ್ಚಾಗಿ ಇವುಗಳ ದಕ್ಷತೆಯ ವಿಸ್ತರಣೆಯನ್ನು ಅವಲಂಬಿಸುತ್ತದೆ.

ಭಾರತದ ಅನೇಕ ವಿಲಾಸ ವಸ್ತುಗಳಿಗೆ ವಿದೇಶಗಳಲ್ಲಿ ಹೆಚ್ಚಿನ ಬೇಡಿಕೆ ಇದೆ. ಈ ರಾಷ್ಟ್ರದ ಒಳಗೆ ಇವುಗಳ ಅನುಭೋಗವನ್ನು ಕಡಿತಗೊಳಿಸಿದರೆ ಈ ಸರಕುಗಳನ್ನು ಹೆಚ್ಚಾಗಿ ರಫ್ತು ಮಾಡುವುದರ ಮೂಲಕ, ಹೆಚ್ಚಿನ ವಿನಿಮಯಗಳಿಸಿ, ರಾಷ್ಟ್ರದ ಪ್ರಮುಖ ಕೈಗಾರಿಕೆಗಳ ಬೆಳವಣಿಗೆಗೆ ಸಹಾಯ ಮಾಡುವುದು ಸಾಧ್ಯವಿದೆ ಎಂಬ ಒಂದು ಅಭಿಪ್ರಾಯವಿದೆ. ಇದು ತುಂಬಾ ಪರಿಶೀಲನಾರ್ಹವಾದ ಸಲಹೆ ಎಂಬುದನ್ನು ಗಮನಿಸಬೇಕು.

ಬೆಳವಣಿಗೆಗೆ ದಕ್ಷತೆಯನ್ನು ಸಂಪೂರ್ಣವಾಗಿ ಬಳಸಿಕೊಳ್ಳಬೇಕು ಎಂಬುದರ ಬಗ್ಗೆ ಎಷ್ಟು ಬೇಕೊ ಅಷ್ಟು ಮಹತ್ವವನ್ನು ನೀಡಲಾಗಿಲ್ಲ. ಬೇರೆ ರಾಷ್ಟ್ರಗಳಿಗೆ ಹೋಲಿಸಿದರೆ, ಕೆಲವೊಂದು ಅಪವಾದಗಳನ್ನು ಬಿಟ್ಟರೆ, ನಮ್ಮ ದೇಶದ ಕೈಗಾರಿಕೆಗಳು ದಕ್ಷತೆಯ ಮಟ್ಟದಲ್ಲಿ ತೀರಾ ಕೆಳಗೆ ನಿಲ್ಲುತ್ತವೆ. ದಕ್ಷತೆಯನ್ನು ಪ್ರಚೋದಿಸುವ ತೀವ್ರ ಕ್ರಮಗಳನ್ನು ತುರ್ತಾಗಿ ಭಾರತದ ಕೈಗಾರಿಕೆಗಳು ಕೈಗೊಳ್ಳಬೇಕಾಗಿದೆ. ಈ ಕ್ರಮಗಳೆಂದರೆ, ಕೈಗಾರಿಕೆಗಳ ಪುನರೀಕರಣ ಆದರ್ಶಮಟ್ಟದ ದಾಸ್ತಾನನ್ನು ಕಾಪಾಡಿಕೊಳ್ಳುವಿಕೆ, ದಕ್ಷತೆಯನ್ನು ಉತ್ತಮವಾಗಿ ಉಪಯೋಗಿಸಿಕೊಳ್ಳುವುದು, ಕೈಗಾರಿಕಾ ಶಾಂತಿಗೆ ಅಗತ್ಯವಾದ ವಾತಾವರಣದ ಸೃಷ್ಟಿ, ಉತ್ತಮವಾದ ಉತ್ತೇಜಕಗಳನ್ನು ನೀಡುವುದು, ಫ್ಯಾಕ್ಟರಿ ಕಾರ್ಮಿಕರಿಗೆ ವಸತಿಸೌಲಭ್ಯ ಇತ್ಯಾದಿ

ಭಾರತದ ಎಲ್ಲ ಕೈಗಾರಿಕೆಗಳಲ್ಲೂ ಇವು ಅತ್ಯಗತ್ಯ. ಉತ್ಪಾದಿಸಲಾಗುವ ಪಕ್ಷತೆಯ ಆಧಾರದ ಮೇಲೆ ಮಾತ್ರ ನಮ್ಮ ರಾಷ್ಟ್ರದ ಕೈಗಾರಿಕೆಗಳು ಭವಿಷ್ಯದ ವಿಸ್ತರಣೆಗೆ ಸರಿಯಾದ ಅಡಿಗಲ್ಲನ್ನು ಹಾಕಬಲ್ಲವು ಅಷ್ಟೆ.

## ಸ್ವಾರೂಪಿಕ ದೃಷ್ಟಿಕೋನ

ನಮ್ಮ ಶಿಫಾರ್ಸುಗಳನ್ನು ಮುಕ್ತಾಯ ಮಾಡುವುದಕ್ಕಿಂತ ಮುಂಚೆ ನಾವು ಸಂಕ್ಷಿಪ್ತವಾಗಿ ಹಣದುಬ್ಬರವನ್ನು 'ಸ್ವಾರೂಪಿಕ' ದೃಷ್ಟಿಕೋನದಿಂದ ನೋಡಬಹುದು. ಪ್ರಸ್ತುತದ 'ಹಣದುಬ್ಬರಕ್ಕೆ' ಈ ದೃಷ್ಟಿಕೋನವೇ ಅತ್ಯಂತ ಪ್ರಮುಖ ಕಾರಣವೆಂದು ಹೇಳಲಾಗುತ್ತದೆ. ಇದರ ವಿವರಣೆ ಹೀಗಿದೆ; ರಾಜಕೀಯ ಹಾಗೂ ಆರ್ಥಿಕ ಶಕ್ತಿಗಳ ಬಲವನ್ನು ಮೂರು ಸಂಯುಕ್ತ ಪಂಗಡಗಳ ಒಲವಿಗಾಗಿ ತಿರುಚಲಾಗಿದೆ. ಈ ಪಂಗಡಗಳೆಂದರೆ (a) ಕೃಷಿರಂಗದ ಶ್ರೀಮಂತವರ್ಗದ ಜನ (b) ಪಟ್ಟಣ ಪ್ರದೇಶದ ಕೈಗಾರಿಕೆ ಮತ್ತು ವಾಣಿಜ್ಯರಂಗದ ಶ್ರೀಮಂತವರ್ಗದ ಜನ ಮತ್ತು (c) ಸಂಬಳ ಪಡೆಯುವ ವರ್ಗದವರು ಮತ್ತು ವ್ಯವಸ್ಥಿತ ಕಾರ್ಮಿಕ ವಿಭಾಗದಲ್ಲಿನ ಹೆಚ್ಚು ಪ್ರತಿಫಲ (ಕೂಲಿ) ಪಡೆಯುವ ವರ್ಗದ ಜನ. ಈ ಮೂರು ವರ್ಗಗಳು ಸಂಯುಕ್ತವಾಗಿ ಇಡೀ ಬ್ಯಾಂಕುಸಾಲದ ಮೇಲೆ ಹತೋಟಿ ಪಡೆದಿದ್ದಾರೆ. ಇಷ್ಟೇ ಅಲ್ಲದೇ, ಅವರು ರಾಜಕೀಯ ನೀತಿಗಳನ್ನು ತಮಗೆ ಅನುಕೂಲಕರವಾಗುವ ರೀತಿಯಲ್ಲಿ ಮಾಡಿಕೊಂಡು, ಅಭಿವೃದ್ಧಿಯ ನೈಜಫಲದಲ್ಲಿ ಸಿಂಹಪಾಲನ್ನು ಪಡೆದುಕೊಳ್ಳುತ್ತಿದ್ದಾರೆ. ಗ್ರಾಮೀಣ ಪ್ರದೇಶದ ಮತ್ತು ಪಟ್ಟಣದ ಅಸಂಖ್ಯಾತ ಬಡವರ್ಗದವರ ಮೇಲೆ ಇದರಿಂದ

ಉಂಟಾಗಬಹುದಾದ ಪರಿಣಾಮಗಳ ಬಗ್ಗೆ ಅವರಿಗೆ ಸ್ವಲ್ಪವೂ ಲಕ್ಷ್ಯವಿಲ್ಲ. ಆದ್ದರಿಂದ ನಿಯಂತ್ರಿಸುವ ಶಕ್ತಿಗಳ ಮೇಲೆ ಬರುವ ಹತೋಟಿಗಳಲ್ಲಿ ತೀವ್ರತರವಾದ ಬದಲಾವಣೆಗಳಿಲ್ಲದೆ ಹಣದುಬ್ಬರವನ್ನು ಹತೋಟಿಗೆ ತರುವುದು ಸಾಧ್ಯವಿಲ್ಲ. ಈ ನಿಲುವಿಗೆ ಅನೇಕ ಛಾಯೆಗಳಿವೆ. ಆದರೆ ಒಟ್ಟಿನಲ್ಲಿ ಈ ದೃಷ್ಟಿಕೋನದ ಸಾರಾಂಶ ಮೇಲಿನಂತಿದೆ.

ಈ ಅಭಿಪ್ರಾಯವು ಎಷ್ಟು ಅನುಭವಾತ್ಮಕವಾದದ್ದು? ಸಹಕಾರಿ ಸಾಲವನ್ನೊಳಗೊಂಡಂತೆ ಬ್ಯಾಂಕು ಉದ್ದರಿಯು ಕೃಷಿರಂಗಕ್ಕೆ ಬಹಳ ಅಲ್ಪಪ್ರಮಾಣದ್ದು; ಇತ್ತೀಚೆಗೆ ಬ್ಯಾಂಕು ಸಾಲದಲ್ಲಿ ಖಾಸಗಿ ಕಾರ್ಪೋರೇಟ್ ರಂಗಕ್ಕೆ ದೊರೆಯುವ ಸಾಲದ ಪ್ರಮಾಣವೂ ಹೆಚ್ಚಾಗಿಲ್ಲ. ನೇರವಾಗಿ ಬ್ಯಾಂಕು ಸಾಲವನ್ನು ಪಡೆದುಕೊಳ್ಳುವುದರಲ್ಲಿ ಖಾಸಗಿ ವಾಣಿಜ್ಯ ರಂಗಕ್ಕೆ ಮೊದಲಿನಿಂದಲೂ ಹೆಚ್ಚಾಗಿ ಸಾಧ್ಯವಿಲ್ಲವಾಗಿದ್ದು, ಆ ರಂಗಕ್ಕೆ ಸಾಲ ಅಷ್ಟು ಪ್ರಮುಖವಾಗಿಲ್ಲ. ವಾಸ್ತವವಾಗಿ ಒಟ್ಟು ಸಾಲದಲ್ಲಿ ಅವರ ಸಾಪೇಕ್ಷ ಹಿಸ್ಸೆ ಕಡಮೆಯಾಗುತ್ತಾ ನಡೆದಿದೆ. ಈ ರಂಗಗಳಲ್ಲಿ ಹೊಸ ಸಾಪೇಕ್ಷವಾಗಿ ಹೆಚ್ಚಿನ ಬ್ಯಾಂಕು ಸಾಲವನ್ನು ಹೆಚ್ಚಿಸಿಕೊಂಡಿರುವುದಕ್ಕೆ ಯಾವ ಪರೋಕ್ಷ ದಾಖಲೆಯನ್ನು ಪಡೆಯುವುದೂ ಕಷ್ಟ. ಹಣದುಬ್ಬರದ ಹಿನ್ನೆಲೆಯಲ್ಲಿ ವ್ಯವಸ್ಥಿತ ರಂಗದ ಕಾರ್ಮಿಕವರ್ಗ ಮತ್ತು ಪಟ್ಟಣ ಪ್ರದೇಶದ ಸಂಬಳ ಪಡೆಯುವ ವರ್ಗದವರ ನೈಜ ಕೂಲಿಮಟ್ಟಗಳಲ್ಲಿ ಹೆಚ್ಚಳ ಉಂಟಾಗಿಲ್ಲ. ಹಿಂದಿನ ವರ್ಷಗಳಲ್ಲಿ ಸಹ ಬಡವರಿಗೆ ಹೋಲಿಸಿದಂತೆ ಈ ವರ್ಗದವರು ಆದಾಯದೃಷ್ಟಿಯಿಂದ ಹೆಚ್ಚನ್ನು ಪಡೆಯುತ್ತಿದ್ದರು. ಸರ್ಕಾರ

ಮಾಡಿರುವ ಹೂಡಿಕೆ ನಿಗದಿಗಳಲ್ಲಿ ಕೃಷಿ ಮತ್ತು ಇತರ ರಂಗಗಳ ಸಾಪೇಕ್ಷ ಹಿಸ್ಸೆ ಸಹ ಯಾವ ಗಣನೀಯ ಬದಲಾವಣೆಯನ್ನೂ ಅನುಭವಿಸಿಲ್ಲ. ಎಲ್ಲ ರಾಜಕೀಯ ಪಕ್ಷಗಳೂ ಕೃಷಿರಂಗದ ಮೇಲಿನ ತೆರಿಗೆ ಹೆಚ್ಚಳಕ್ಕೆ ವಿರೋಧವನ್ನು ವ್ಯಕ್ತಪಡಿಸುವುದನ್ನು, ವಿತ್ತನೀತಿಯ ಅಂಜುಬುರಕುತನ ಮತ್ತು ವಿತ್ತನೀತಿಯ 'ಕೇಡೆಣಿಸುವ' ಆಶಗಳಿಂದ ವಿವರಿಸಬಹುದು. ಅಂತರರಂಗ ವಾಣಿಜ್ಯ ಪ್ರತ್ಯಯದಲ್ಲಿ ದೀರ್ಘಾವಧಿ ಚಲನೆಗಳನ್ನು ಆಹಾರ "ಮೂಲಾವಶ್ಯಕ"ವಾಗಿರುವಂತಹ ತಾತ್ವಿಕ ಅಂಶಗಳು ವಿವರಿಸುತ್ತವೆ. ಸರ್ಕಾರ ಆಹಾರಧಾನ್ಯಗಳನ್ನು ಪಡೆದು ಕೊಳ್ಳುವುದಕ್ಕೆ ಮಾಡುವ ಬೆಲೆನಿರ್ಣಯಗಳನ್ನು, ಪ್ರಭಾವಿಸುವ ಅಂಶಗಳನ್ನು ಭಾಗಶಃ ಮೇಲಿನ ತಾತ್ವಿಕ ಅಂಶಗಳ ಪಟ್ಟಿಗೆ ಸೇರಿಸಬೇಕು. ಬಜೆಟ್ ಖೋತಾವನ್ನು, ನಾವು ಪ್ರತಿಯೊಂದು ಬಾಬ್ತನ್ನು ಪರಿಶೀಲಿಸುವುದರ ಮೂಲಕ ನೋಡಿದರೆ, "ಸ್ವಾರೂಪಿಕ" ಸಿದ್ಧಾಂತ ಮಾರ್ಗದಲ್ಲಿ ಬರಲಾಗದ ಅನೇಕ ಕಾರಣಗಳ ಗುಂಪುಗಳನ್ನೇ ನಾವು ಗಮನಿಸಬಹುದು, ನಾವು ವಿವರಿಸುವ ಮೂರು ವರ್ಗಗಳ ಹಿತಾಸಕ್ತಿಗಳ ಸತತ ಒಮ್ಮತದ ಸಿದ್ಧಾಂತವನ್ನು, ಪ್ರತಿಯೊಂದು ನಿರ್ಣಯದಲ್ಲೂ ಹಿತಾಸಕ್ತಿಗಳ ಮಿಲನವನ್ನು ಪರಿಶೀಲಿಸುವುದರ ಮೂಲಕ ಮತ್ತು ಕೃಷಿ ಬೆಲೆ ಸಮಿತಿ ಮತ್ತು ಬ್ಯಾಂಕುಗಳ ಬೋರ್ಡ್‌ಗಳ ಕೆಲಸಗಳನ್ನು ವಿಮರ್ಶಿಸುವುದರ ಮೂಲಕ ನಡೆಸಬೇಕು.

"ಸ್ವಾರೂಪಿಕ" ಸಿದ್ಧಾಂತವು ದೊರಕಿಸಿಕೊಡುವ ಅಮೂಲ್ಯವಾದ ಸಾಮಾಜಿಕ ಒಳ ಅಂಶಗಳನ್ನು ಹೊರಹೊಮ್ಮಿಸುವ ದೃಷ್ಟಿಯಿಂದ ಈ ಸಂವಾದಿರಾಗವನ್ನು ಹಾಡಿಲ್ಲ. ಆದರೆ, ಹೆಚ್ಚು

ಬಲಯುತವಾದ ಮತ್ತು ಪ್ರಾಯೋಗಿಕಸಿದ್ಧವಾದ ವಿಷಯ ಪ್ರತಿಪಾದನೆಯ ಅಗತ್ಯವನ್ನು ಒತ್ತಿಹೇಳುವುದಕ್ಕಾಗಿ ಮಾತ್ರ ಹಾಗೆ ಮಾಡಲಾಗಿದೆ. ನಮ್ಮ ಈ ಪತ್ರದಲ್ಲಿ ಸೂಚಿಸಲಾಗಿರುವ ಹಣದುಬ್ಬರ ವಿರೋಧಿಕ್ರಮಗಳು, ವಿತರಣೆ ವ್ಯವಸ್ಥೆಯನ್ನು ಬಡವರ್ಗದ ಪರವಾಗಿ ತಿರುಚುತ್ತದೆ ಎನ್ನುವುದು ಈಗ ಸ್ಪಷ್ಟವಾಗಬೇಕು. ಇದು ನೀತಿ ನಿರ್ಮಾಪಕರ ಗುರಿಯಾದರೆ, ಈ ಪತ್ರದಲ್ಲಿ ವ್ಯಕ್ತಪಡಿಸಲಾಗಿರುವ ಹಣಕಾಸು ಹಾಗೂ ವಿತ್ತ ಕ್ರಮಗಳ ನಿಲುವಿನ ಧ್ಯೇಯ ಸಫಲವಾದಂತೆ. ಏಕೆಂದರೆ ಈ ಕ್ರಮಗಳು ರಾಷ್ಟ್ರದ ನೀತಿಯನ್ನು ರೂಪಿಸುವವರು ಯಾವ ಸಾಮಾಜಿಕ ಬದಲಾವಣೆಗಳನ್ನು ತರಲು ಇಚ್ಛಿಸುತ್ತಾರೋ ಅವುಗಳನ್ನೆಲ್ಲ ಈ ಕ್ರಮಗಳಿಂದ ಯಾವ ಧಕ್ಕೆಯೂ ಆಗದಂತೆ ಸಾಧಿಸಬಹುದು.

## ಶಿಫಾರಸುಗಳ ಸಾರಾಂಶ

ಮೇಲಿನವರೆಗಿನ ನಮ್ಮ ವಿವರಣೆಯು, ಹಣದುಬ್ಬರದ ವಿರುದ್ಧ ನಮ್ಮ ನೀತಿಯ ಸ್ವರೂಪದ ಪ್ರಮುಖ ಅಂಶಗಳನ್ನೊಳಗೊಂಡಿದೆ. ಹಣದುಬ್ಬರದ ಮೂಲಗಳನ್ನು ಹತ್ತಿಕ್ಕಲು ಕೆಳಗೆ ನಮ್ಮ ಸೂಚನೆಗಳ ಸಾರಾಂಶವನ್ನು ಕೊಡಲಾಗಿದೆ. ಈ ಸಾರಾಂಶಗಳನ್ನು ನಮ್ಮ ನೀತಿಗಳ ಚೌಕಟ್ಟಿನ ಹಿನ್ನೆಲೆಯಲ್ಲಿ, ಸಮಗ್ರ ನೀತಿಯಾಗಿ ಗ್ರಹಿಸಬೇಕು.

(i) 'ಕಪ್ಪುಹಣದ' ಭಾರವನ್ನು ಗಣನೀಯ ಪ್ರಮಾಣದಲ್ಲಿ ಕಡಮೆ ಮಾಡುವುದು ಮತ್ತು ಬೆಲೆಮಟ್ಟಗಳನ್ನು ಕೆಳಗಿಳಿಸುವುದು ಆರ್ಥಿಕ ನೀತಿಯ ತಕ್ಷಣದ ಗುರಿಯಾಗಬೇಕು. ಈ ಕ್ರಮವು ಭಾಗಶಃ ಮರುನಾಣ್ಯೀಕರಣದ ಮೂಲಕ ಹಣದ ಒಟ್ಟು

ಸರಬರಾಜಿನಲ್ಲಿ ಶೇ. 30ರಷ್ಟನ್ನು ನಿಷ್ಕ್ರಿಯ ಮಾಡುವ ಕ್ರಮವನ್ನು ಅಗತ್ಯವಾಗಿಸುತ್ತದೆ. ಈರೀತಿ ನಿಷ್ಕ್ರಿಯ ಗೊಳಿಸಲಾಗುವ ಹಣ, ಅದ್ರವ್ಯವಾದ ಸರ್ಟಿಫಿಕೇಟ್ ಮತ್ತು ತಡೆಹಿಡಿಯಲ್ಪಟ್ಟಿರುವ ಲೆಕ್ಕಗಳ ರೂಪದಲ್ಲಿದ್ದು ನಿಶ್ಚಿತ ದರದ ಬಡ್ಡಿಯನ್ನು 20 ವರ್ಷಗಳವರೆಗೆ ಪಡೆಯುವ ಅವಕಾಶವನ್ನು ಹೊಂದಿರುತ್ತದೆ.

(ii) ಐದನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಹಣ ನೀಡಿಕೆಯ ಬೆಳವಣಿಗೆಯ ದರದಮೇಲೆ ಶೇ. 5ರ ಮಿತಿ ಹೇರಲ್ಪಡಬೇಕು.

(iii) ಐದನೆಯ ಪಂಚವಾರ್ಷಿಕ ಯೋಜನೆಯ ಮೊದಲೆರಡು ವರ್ಷಗಳಲ್ಲಿ ಇಡೀ ಬ್ಯಾಂಕಿಂಗ್ ವ್ಯವಸ್ಥೆಯಿಂದ ಸರ್ಕಾರ ಸಾಲ ಪಡೆಯುವುದನ್ನು ಸಂಪೂರ್ಣವಾಗಿ ತಪ್ಪಿಸಬೇಕು. ಐದನೇ ಪಂಚವಾರ್ಷಿಕ ಯೋಜನಾವಧಿಯಲ್ಲಿ ಆಲೋಚಿಸಲಾಗಿರುವ ಸರ್ಕಾರಿ ವೆಚ್ಚ ಹೆಚ್ಚಳವನ್ನು, ಸಂಯುಕ್ತಿಕವಾಗಿ ಮಾಡು ವುದರ ಮೂಲಕ ಮತ್ತು ಹಣದುಬ್ಬರರಹಿತ ಮೂಲ ಗಳಿಂದ ಬರುವ ಆದಾಯಗಳ ಮೂಲಕ ನಿರ್ವಹಿಸಬೇಕು. ಕೈಗಾರಿಕೆ-ವಾಣಿಜ್ಯರಂಗಗಳಿಗೆ ಬ್ಯಾಂಕು ಸಾಲ ಪ್ರಮಾಣವನ್ನು ಶೇ. 5ರ ಗರಿಷ್ಠಮಿತಿಗೆ ಗೊತ್ತುಮಾಡಬೇಕು. ಬ್ಯಾಂಕು ಸಾಲದ ಮೂಲಕ ದಾಸ್ತಾನುಗಳಿಗೆ ಒದಗಿಸುವ ಹಣದ ಪ್ರಮಾಣವನ್ನು ದಾಸ್ತಾನು ಮೌಲ್ಯದ ಶೇ. $33\frac{1}{3}$ ಕ್ಕೆ ಇಳಿಸಬೇಕು.

(iv) ಸಂಚಯೇತರ ವೆಚ್ಚಗಳಲ್ಲಿ ತೀವ್ರ ಮಿತವ್ಯಯವನ್ನು ಸಾಧಿಸುವುದರ ಮೂಲಕ ಸರ್ಕಾರೀ ವೆಚ್ಚಗಳನ್ನು ಸಂಯುಕ್ತಿಕ

ವಾಗಿ ಮಾಡುವ ಧ್ಯೇಯವನ್ನು ಸಾಧಿಸುವುದು ಸಾಧ್ಯ. ಮಿತವ್ಯಯ ಪ್ರಚಾರಗಳು, ಪ್ರಾಜೆಕ್ಟ್‌ಗಳನ್ನು ಮರುರೂಪಿಸುವುದರ ಮೂಲಕ ವಿರಳ ಸರಕುಗಳ ಮಿತವ್ಯಯವನ್ನು ಸಾಧಿಸಬಹುದು. ಶ್ರೀಮಂತ, ಮಧ್ಯಮ ಮತ್ತು ವ್ಯವಸ್ಥಿತ ರಂಗದ ಜನರಿಗೆ, ಹೆಚ್ಚಿನಂಶ ಲಾಭವಾಗುವ ರೆವಿನ್ಯೂ ವೆಚ್ಚಗಳನ್ನು ಕ್ರಮಕ್ರಮವಾಗಿ ಸರ್ಕಾರ ಕೈಬಿಡುವುದು ಅಗತ್ಯ.

(v) ಪ್ರಾಜೆಕ್ಟ್‌ಗಳನ್ನು ಆರಿಸಲು ಮತ್ತು ಯಾವ ಪ್ರದೇಶದಲ್ಲಿ ಅವನ್ನು ನಿರ್ಮಿಸಬೇಕೆಂಬ ಬಗ್ಗೆ ತೀರ್ಮಾನ ಕೈಗೊಳ್ಳಲು ಲಾಭ–ವೆಚ್ಚವು ನಿರ್ಣಾಯಕ ಸಾಧನವಾಗಬಲ್ಲದು. ಪ್ರಾಜೆಕ್ಟ್‌ಗಳು ಕನಿಷ್ಠ ಶೇ. 12½ ಯ ಛಾಯಾ ಬಡ್ಡಿದರದ ಮೇಲೆ ಆಧಾರಿತವಾಗಬೇಕು. ಹೊಸದಾಗಿ ಮಂಜೂರಾಗುವ ಎಲ್ಲ ಬಂಡವಾಳ ಪ್ರಾಜೆಕ್ಟ್‌ಗಳನ್ನು ಅವುಗಳ ವಿತ್ತ ಸ್ಥೈರ್ಯದ ಮೇಲೆ ಪರಿಶೀಲಿಸಬೇಕು. ಸರ್ಕಾರದಲ್ಲಿರುವ ಎಲ್ಲಮಟ್ಟದ ಕಾರ್ಮಿಕರಿಗೂ ಕೆಲಸದ ಮಿತಿಯನ್ನು ಗೊತ್ತುಮಾಡಬೇಕು. ರಕ್ಷಣಾಪಡೆಯಲ್ಲಿರುವವರ ಸೇವೆಯನ್ನು ಅಲ್ಪಕಾಲದಲ್ಲೇ ಪೂರೈಸಬಹುದಾದ ಪ್ರಾಜೆಕ್ಟ್‌ಗಳ ಕೆಲಸಕ್ಕೆ ನೇಮಿಸಿಕೊಳ್ಳುವುದರ ಸಾಧ್ಯತೆಯನ್ನು ಪರಿಶೀಲಿಸಬೇಕು. ಅವರನ್ನು ತುರ್ತು ಉತ್ಪಾದನೆ ಯೋಜನೆಗಳಲ್ಲಿ, ಅದರಲ್ಲೂ ಆಹಾರ ಪದಾರ್ಥಗಳ ಉತ್ಪಾದನೆಯ ಕಾರ್ಯಗಳಲ್ಲಿ ನೇಮಿಸಿಕೊಳ್ಳುವುದನ್ನು ಪರಿಶೀಲಿಸಬೇಕು.

(vi) ಸರ್ಕಾರದ ಬೊಕ್ಕಸದಿಂದ ನಾನಾ ರೀತಿಯ ಸಹಾಯಧನ ನೀಡುವುದನ್ನು ಮತ್ತು ಅದನ್ನು ಮುಂದುವರಿಸಿಕೊಂಡು ಹೋಗುವುದರ ಅವಶ್ಯಕತೆಯನ್ನು ನಿರಂತರವಾಗಿ ಪರಿಶೀಲಿಸಲು

ಸರಿಯಾದ ವ್ಯವಸ್ಥೆಯನ್ನು ಮಾಡಬೇಕು. ಕೆಲವು ವರ್ಗದ ಅನುಭೋಗಿಗಳಿಗೆ ಮತ್ತು ಸರ್ಕಾರದ ನೌಕರರಿಗೆ ಸಹಾಯಧನದಿಂದಾಗಿ ಕಡಮೆ ದರಗಳಲ್ಲಿ ಕೆಲವು ವಸ್ತುಗಳನ್ನು ಸರಬರಾಜು ಮಾಡುವುದು, ರಿಯಾಯಿತಿ ಬಡ್ಡಿದರದಲ್ಲಿ ಸಾಲಗಳನ್ನು ನೀಡುವುದು ಉಚಿತ ಅಥವಾ ಕಡಮೆ ಬಾಡಿಗೆಗೆ ವಸತಿ ಸೌಲಭ್ಯಗಳನ್ನು ಕಲ್ಪಿಸಿಕೊಡುವುದು, ಪ್ರವಾಸ ಸೌಲಭ್ಯಗಳನ್ನು ಒದಗಿಸುವುದು ಇವುಗಳನ್ನು ಪ್ರತಿಯೊಂದು ಅವಧಿಯಲ್ಲೂ ಪರಿಶೀಲಿಸಬೇಕು.

(vii) ಬ್ಯಾಂಕಿನ ಬಡ್ಡಿದರ, ಠೇವಣಿ ಮೇಲಿನ ದರದ ಸ್ವರೂಪಗಳು ಮತ್ತು ಪ್ರತಿಫಲ ದರಗಳನ್ನು ಮೇಲ್ಮುಖವಾಗಿ ಪುನರ್ವಿಮರ್ಶಿಸಬೇಕು. ಮಧ್ಯಮಾವಧಿ ಮತ್ತು ದೀರ್ಘಾವಧಿ ಉಳಿತಾಯದಾರರಿಗೆ ಅನುಕೂಲವಾಗುವ ರೀತಿಯಲ್ಲಿ ಈ ದರಗಳ ಸ್ವರೂಪವನ್ನು ನವೀಕರಣ ಮಾಡಬೇಕು. ಬ್ಯಾಂಕುಗಳು ತಾವು ನೀಡುವ ಸಾಲದ ಮೇಲಿನ ಬಡ್ಡಿದರವನ್ನು ಸಹ ಏರಿಸಬೇಕು.

(viii) ವ್ಯಕ್ತಿಗಳು ಮತ್ತು ಕಾರ್ಖಾನೆಗಳ ಸುಖವಿಲಾಸೀ ಅನುಭೋಗಗಳನ್ನು ತೆರಿಗೆ ಸಾಧನದಿಂದ ಕಡಮೆ ಮಾಡಿ, ವಿರಳ ವಸ್ತುಗಳ ಮೇಲೆ ಇರುವ ಅಧಿಕ ಬೇಡಿಕೆಯನ್ನು ಕಡಮೆ ಮಾಡಬೇಕು. ಈ ಮಾರ್ಗದಿಂದಲೆ ರಫ್ತು ಪ್ರೋತ್ಸಾಹ, ಕೆಲವೊಂದು ನಿರ್ದಿಷ್ಟ ಉಳಿತಾಯಗಳ ಪ್ರೋತ್ಸಾಹವನ್ನು ಕೈಗೊಳ್ಳಬೇಕು. ಸ್ವಯಂತೃಪ್ತತೆಯನ್ನು ಸಾಧಿಸಲು ಅಗತ್ಯವಾದ ಅನೇಕ ಸರಕುಗಳ ಖಾಸಗೀ ಉತ್ಪನ್ನವನ್ನು ಈ ಮಾರ್ಗದಿಂದಲೇ ಸಾಧಿಸಬೇಕು. ವಿಭೇದಕ ಅಬ್ಕಾರಿ ಸುಂಕಗಳು,

ಹೆಚ್ಚು ಉಳಿತಾಯಕ್ಕಾಗಿ ಕೊಡಲಾಗುವ ತೆರಿಗೆ ರಿಯಾಯಿತಿ, ಉತ್ಪಾದನ ದಕ್ಷತೆಯನ್ನು ಉಪಯೋಗಿಸಿಕೊಳ್ಳುವುದಕ್ಕೋಸ್ಕರ ಕೊಡಲಾಗುವ ತೆರಿಗೆರಿಯಾಯಿತಿ ಇವುಗಳು ಕ್ರಮಬದ್ಧವಾಗಿವೆ. ತೆರಿಗೆ ಬಿರುಕುಗಳನ್ನು ಮುಚ್ಚಬೇಕು. ಕೃಷಿಯಿಂದ ಬರುವ ತೆರಿಗೆ ಆದಾಯವನ್ನು ಕೃಷಿ ನಿವ್ವಳ ಉತ್ಪನ್ನದ ಶೇ. 3ಕ್ಕೆ ಹೆಚ್ಚಿಸಬೇಕು.

(ix) ಸುಮಾರು ಆರು ತಿಂಗಳ ಅವಧಿಗೆ ಅಗತ್ಯವಾಗುವಷ್ಟು ವಿದೇಶೀ ವಿನಿಮಯವನ್ನು ಸಂಗ್ರಹಿಸಿಟ್ಟುಕೊಳ್ಳಬೇಕು. ರಫ್ತು ಸುಂಕಗಳನ್ನು ಆಯ್ದು ಸರಕುಗಳ ಮೇಲೆ ವಿಧಿಸಬೇಕು. ಈ ಸುಂಕಗಳು ಜಡಸ್ವರೂಪದ್ದಾಗಿರದೆ ಅವನ್ನು ಹೆಚ್ಚು ಅಥವಾ ಕಡಮೆ ಮಾಡುವ ಸಾಧ್ಯತೆಗಳಿರಬೇಕು. ತೈಲಬಿಕ್ಕಟ್ಟನ್ನು ಎದುರಿಸಲು ಅನೇಕ ಕ್ರಮಗಳನ್ನು ಕೈಗೊಳ್ಳಬೇಕು. ಅವುಗಳಲ್ಲಿ ಮುಖ್ಯವಾದುವೆಂದರೆ ನಮ್ಮ ರಾಷ್ಟ್ರಕ್ಕೆ ಅನುಕೂಲವಾದ ಕೆಲವು ಸಾರಿಗೆ ವ್ಯವಸ್ಥೆಗಳನ್ನು ಕೈಗೊಳ್ಳುವುದು, ಸಾರ್ವಜನಿಕ ಸಾರಿಗೆಯ ಹೆಚ್ಚಿನ ಬಳಕೆ, ಜಾನುವಾರುಗಳ ಗೊಬ್ಬರದ ಬಳಕೆಯಲ್ಲಿನ ಹೆಚ್ಚಳ, ಕಟ್ಟಡ ಉದ್ಯಮದಲ್ಲಿ ಸೂಕ್ತ ಬದಲಾವಣೆಗಳು ಇತ್ಯಾದಿ.

(x) ಮುಂಬರುವ ವರ್ಷಗಳಲ್ಲಿ ಕುಟುಂಬಜೀವನಕ್ಕೆ ಅಗತ್ಯವಾದ ಆಹಾರಪದಾರ್ಥಗಳು, ಕಾಗದ, ತೈಲ, ವಿದ್ಯುಚ್ಛಕ್ತಿ, ಸಾರಿಗೆಸೌಕರ್ಯ ಮುಂತಾದ ವಸ್ತುಗಳ ಕೊರತೆ ಮುಂದುವರೆಯುವ ಸಾಧ್ಯತೆ ಇರುವುದರಿಂದ, ಎರಡನೆ ಮಹಾಯುದ್ಧದ ಅವಧಿಯಲ್ಲಿ ನಡೆಸಿದಂತೆಯೆ ಮಿತವ್ಯಯ ಪ್ರಚಾರವನ್ನು ಆರಂಭಿಸುವುದು ಅತ್ಯಂತ ಮುಖ್ಯವಾದ ಕರ್ತವ್ಯವಾಗಿದೆ.

ಸಾರ್ವಜನಿಕ ವಿತರಣೆ ವ್ಯವಸ್ಥೆಯನ್ನು ವಿಸ್ತರಿಸುವುದು ಅಗತ್ಯ. ಇದಕ್ಕಾಗಿ ನ್ಯಾಯ ಬೆಲೆ ಅಂಗಡಿಗಳನ್ನು ಹೆಚ್ಚು ಮಾಡುವುದು, ಪಟ್ಟಣಪ್ರದೇಶಗಳಲ್ಲಿ ಸ್ವತಂತ್ರ ಸಂಸ್ಥೆಗಳನ್ನು ಮಾಧ್ಯಮವಾಗಿ ಮಾಡಿಕೊಳ್ಳುವುದು ಮತ್ತು ಗ್ರಾಮೀಣ ಪ್ರದೇಶದಲ್ಲಿ ಮಾನ್ಯತೆ ಪಡೆದಿರುವ ಖಾಸಗಿ ಚಿಲ್ಲರೆ ವ್ಯಾಪಾರಿಗಳ ಮೂಲಕ ವಿತರಣೆ ನಡೆಸುವ ಕ್ರಮಗಳನ್ನು ಕೈಗೊಳ್ಳಬೇಕು. ಈ ವಿತರಣೆಯ ಜಾಲಕ್ಕೆ ಸರಕುಗಳನ್ನು ಪೂರೈಕೆ ಮಾಡುವ ವ್ಯವಸ್ಥೆಯನ್ನು ಸಹ ಬಲಪಡಿಸುವುದು ಅಗತ್ಯ. ಇದಕ್ಕಾಗಿ ಆಹಾರಧಾನ್ಯ ಖಾದ್ಯ, ತೈಲ, ಸಕ್ಕರೆ, ಬೇಳೆಗಳು, ಮುಂತಾದ ವಸ್ತುಗಳನ್ನು ಏಕರೂಪವಾದ ಕಡ್ಡಾಯ ಲೇವಿಯ ಮೂಲಕ ಸರ್ಕಾರ ಪಡೆದು ಕೊಂಡು ವಿತರಣೆಯನ್ನು ಸುಗಮಗೊಳಿಸಬೇಕು. ಸ್ಟಾಂಡರ್ಡ್ ಆದ ಬಟ್ಟೆ ವಿಷಯದಲ್ಲಿ ಮಿಲ್ಲುಗಳು ಮತ್ತು ವಿಕೇಂದ್ರೀಕೃತ ರಂಗಗಳ ನಡುವೆ ಉತ್ಪಾದನೆ ಮತ್ತು ವಿತರಣೆಯ ವಿಷಯದಲ್ಲಿ ನಿಯಂತ್ರಣೆಯನ್ನು ಮಾಡಬೇಕು. ವಿತರಣೆಯ ಕಾಲಕ್ಕೆ ಸತತವಾಗಿ ಸರಕುಗಳನ್ನು ಪೂರೈಸುವುದಕ್ಕಾಗಿ ಪ್ರತಿಯೊಂದು ರಾಜ್ಯದಲ್ಲಿಯೂ ವಿಕೇಂದ್ರೀಕೃತ ದಾಸ್ತಾನು ಕೇಂದ್ರಗಳನ್ನು ಅಭಿವೃದ್ಧಿಪಡಿಸಬೇಕು. ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳಬೇಕು. ಸರ್ಕಾರಕ್ಕೆ ಇಂತಹ ವ್ಯವಸ್ಥೆಯನ್ನು ದಕ್ಷ ಹಾಗೂ ಪ್ರಾಮಾಣಿಕವಾಗಿ ಮಾಡುವ ರಾಜಕೀಯ ಬಲವಿಲ್ಲದಿದ್ದರೆ ಅದು ರಾಷ್ಟ್ರದಲ್ಲಿ ಈಗಾಗಲೆ ಇರುವ ಅಸ್ತವ್ಯಸ್ಥತೆ, ಅಶಾಂತಿ ಗಳನ್ನು ಹೆಚ್ಚು ಮಾಡುತ್ತದಲ್ಲದೆ ಬಡವರಿಗೆ ಯಾವ ಒಂದು ಉಪಕಾರವನ್ನು ಮಾಡುವುದಕ್ಕೂ ಸಾಧ್ಯವಾಗುವುದಿಲ್ಲ.

(xi) ಮೂಲಾವಶ್ಯಕ ವಸ್ತುಗಳಲ್ಲೆಲ್ಲ ಆಹಾರಪದಾರ್ಥ ಗಳು ಅತ್ಯಂತ ಮುಖ್ಯವಾದುವು. ಅವುಗಳ ನೀಡಿಕೆ ಬಹಳ

ಅನಿಶ್ಚಿತವಾಗಿದೆ. ಆದ್ದರಿಂದ ನಮ್ಮ ರಾಷ್ಟ್ರದಲ್ಲಿ ಅನುಭೋಗದಲ್ಲಿ ಸಾಧ್ಯವಾದಷ್ಟು ಮಿತವ್ಯಯ ಮತ್ತು ಪ್ರತಿವರ್ಷದ ಆಹಾರದ ಉತ್ಪಾದನೆಯಲ್ಲಿ ಸಾಧ್ಯವಾದಷ್ಟು ಹೆಚ್ಚಳವನ್ನು ಸಾಧಿಸಿ ಗಣನೀಯ ಪ್ರಮಾಣದ ದಾಸ್ತಾನು ಸಂಗ್ರಹವನ್ನು ಮಾಡಿಕೊಳ್ಳಬೇಕಾಗಿರುವುದು ಅತ್ಯಗತ್ಯವಾಗಿದೆ. ಎರಡನೆ ಮಹಾಯುದ್ಧ ಮತ್ತು ಯುದ್ಧಾನಂತರದ ತಕ್ಷಣದ ಅವಧಿಯಲ್ಲಿನ "ಹೆಚ್ಚು ಆಹಾರ ಬೆಳೆಯಿರಿ" ಎಂಬ ಘೋಷಣೆ ಮತ್ತು ಉತ್ಪಾದನೆಯ ಹೆಚ್ಚಳಕ್ಕೆ ಅಗತ್ಯವಾದ ಇತರ ಪ್ರಚಾರ ಕಾರ್ಯಗಳನ್ನು, ಪ್ರಸ್ತುತ ಪರಿಸ್ಥಿತಿಗೆ ಹೊಂದಿಕೊಳ್ಳುವಂತೆ ಮತ್ತೆ ಪ್ರಾರಂಭಿಸಬೇಕಾಗಿದೆ. ಆಹಾರವಸ್ತುಗಳ ಬೆಲೆ ಮಟ್ಟಗಳಲ್ಲಿ ಸಾರ್ವತ್ರಿಕ ಬೆಲೆಮಟ್ಟಗಳಲ್ಲಿ ಕೇಂದ್ರ ಪಾತ್ರವನ್ನು ವಹಿಸುತ್ತವೆ. ಆದ್ದರಿಂದ ದಾಸ್ತಾನು ಸಂಗ್ರಹವನ್ನು ಯೋಜಿತ ಆಹಾರದ ಆಮದಿನಿಂದ ಬಲಪಡಿಸುತ್ತ ತೀವ್ರವಾಗಿ ಆಹಾರದ ಕೊರತೆಯುಂಟಾಗುವ ಸಂದರ್ಭಗಳಲ್ಲಿ ಸತತವಾಗಿ ಆಹಾರದ ನೀಡಿಕೆಯಾಗುವಂತೆ ನೋಡಿಕೊಳ್ಳಬೇಕು. ಈ ಕ್ರಮದಿಂದ ನಮ್ಮ ಸಂಕಷ್ಟದ ಸಂದರ್ಭಗಳಲ್ಲಿ ಹೊರರಾಷ್ಟ್ರಗಳಿಂದ ಹೆಚ್ಚಿನ ಬೆಲೆಗೆ ಆಹಾರವಸ್ತುಗಳನ್ನು ಕೊಳ್ಳುವುದನ್ನು ಸಹ ತಪ್ಪಿಸಬಹುದು.

(xii) ಅಪವ್ಯಯವನ್ನು ತಪ್ಪಿಸುವುದಕ್ಕೆ, ಎಲ್ಲ ಮಟ್ಟಗಳಲ್ಲಿ ಸರಳತೆಯನ್ನು ಅನುಸರಿಸುವುದಕ್ಕೆ ಒಂದು ರಾಷ್ಟ್ರೀಯ ಮಟ್ಟದ ಪ್ರಚಾರವನ್ನೇ ಆರಂಭಿಸಬೇಕು. ಕ್ಯೂ ಪದ್ಧತಿಯನ್ನು ಆರಂಭಿಸಿ ಅದು ಸರಿಯಾಗಿ ಅಭಿವೃದ್ಧಿಗೊಳ್ಳುವಂತೆ ನೋಡಿಕೊಳ್ಳಬೇಕು. ಸರಳ ಜೀವನಕ್ರಮವು ಮೇಲ್ಮಟ್ಟದಿಂದ ಆರಂಭವಾಗಬೇಕು. ಹೀಗಾದರೆ ನಮ್ಮಲ್ಲಿರುವಷ್ಟರಲ್ಲಿಯೆ ಬದುಕುವ ಒಂದು

ರಾಷ್ಟ್ರೀಯ ಅಭ್ಯಾಸವು ಸಾಮಾಜಿಕ ಗುಣವಾಗಿ ಆಗುವುದು ಸಾಧ್ಯವಾಗುತ್ತದೆ

(xiii) ಖಾಸಗಿ ಕ್ಷೇತ್ರಕ್ಕಾಗಲಿ, ಸಾರ್ವಜನಿಕ ಕ್ಷೇತ್ರಕ್ಕಾಗಲಿ ಸೇರಿದ ಸಂಸ್ಥೆಗಳು ರಾಷ್ಟ್ರದ ಉಳಿತಾಯಕ್ಕೆ ಸಾಕಷ್ಟು ಹೆಚ್ಚಿನ ಕಾಣಿಕೆಗಳನ್ನು ನೀಡುತ್ತಿಲ್ಲ. ಕೆಲವಂತೂ ಲಾಭ ಮಾಡುವುದಿರಲಿ, ಲಾಭ-ನಷ್ಟಗಳಿಲ್ಲದ ಒಂದು ಸ್ಥಿತಿಯಲ್ಲೂ ಇಲ್ಲ. ಅಂದರೆ ಹಲವು ನಷ್ಟವನ್ನು ಅನುಭವಿಸುತ್ತಿವೆ. ಈ ಉದ್ಯಮಗಳಲ್ಲಿನ ಆಡಳಿತ ಮತ್ತು ಕಾರ್ಮಿಕ ವರ್ಗಕ್ಕೆ ಸಾಕಷ್ಟು ಮಟ್ಟದ ಸಾರ್ವಜನಿಕ ಹೊಣೆ ಇಲ್ಲ. ಸಾರ್ವಜನಿಕ ಉದ್ಯಮಗಳ ಕೆಲಸದ ವಾತಾವರಣವನ್ನು ಸಂಪೂರ್ಣವಾಗಿ ಬದಲಾಯಿಸಬೇಕು. ಪ್ರತಿಯೊಂದು ಉದ್ಯಮದಲ್ಲೂ ಒಬ್ಬ ಮೇಲಧಿಕಾರಿಯನ್ನು ಇಟ್ಟದ್ದು ಅವನು ಪ್ರತಿನಿತ್ಯದ ಕಾರ್ಯ ನಿರ್ವಹಣೆಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳಬೇಕು. ಇವನನ್ನೇ ಉತ್ಪಾದನೆಯ ಎಲ್ಲ ಆಗುಹೋಗುಗಳಿಗೆ ಹೊಣೆಗಾರ ನನ್ನಾಗಿ ಮಾಡಬೇಕು. ಉತ್ಪಾದನೆಯಲ್ಲಿ ಗಣನೀಯ ಹೆಚ್ಚಳ ವನ್ನು ತೋರಿಸಿದರೆ ಇದಕ್ಕೆ ಸರಿಯಾದ ಪ್ರತಿಫಲ ಮತ್ತು ಮಾನ್ಯತೆಗಳನ್ನು ನೀಡಬೇಕು. ಪ್ರತಿಯೊಂದು ಉದ್ಯಮಕ್ಕೂ ಅದು ಎಷ್ಟು ಹೆಚ್ಚಳ ಉತ್ಪನ್ನವನ್ನು ಸಾಧಿಸಬೇಕೆಂಬುದರ ಬಗ್ಗೆ ಪಂಚವಾರ್ಷಿಕ ಗುರಿಗಳನ್ನು ಗೊತ್ತುಮಾಡಬೇಕು.

(xiv) ನೈಸರ್ಗಿಕ ದುರ್ಘಟನೆಗಳು ನಡೆದಾಗ ಪರಿಹಾರ ವೆಚ್ಚಕ್ಕೆ ಬೇಕಾದ ಹಣವನ್ನು, ತುರ್ತುಸರ್ಚಾರ್ಜುಗಳು, ಲೆವಿಗಳು ಮತ್ತು ಠೇವಣಿಗಳ ಮೂಲಕ ಪೂರೈಸಬೇಕು. ಈ ಸೌಲಭ್ಯವು ದುರುಪಯೋಗವಾಗದಂತೆ ನೋಡಿಕೊಳ್ಳಲು

ಇಂತಹ ವೆಚ್ಚಗಳಿಗೆ ಕ್ರಮಬದ್ಧವಾದ ನಿಯಮಾವಳಿಗಳನ್ನು ರೂಪಿಸಬೇಕು.

(xv) ಒಂದು ಕೈಗಾರಿಕಾ ಒಪ್ಪಂದವನ್ನು ಕೂಡಲೆ ಜಾರಿಗೆ ತರಬೇಕು. ವೇತನಗಳು, ಲಾಭಗಳು ಮತ್ತು ಡಿವಿಡೆಂಡ್‌ಗಳನ್ನು ಅವುಗಳ ಪ್ರಸ್ತುತ ಮಟ್ಟದಲ್ಲಿ 2 ವರ್ಷಗಳವರೆಗೆ ಹೆಪ್ಪುಗಟ್ಟಿಸ ಬೇಕು. ಇದೇ ಸಮಯದಲ್ಲಿ ಆದಾಯ ವ್ಯತ್ಯಾಸ ಅಧ್ಯಯನ ಸಮಿತಿಯೊಂದನ್ನು ರಚಿಸಬೇಕು. ಈ ಸಮಿತಿಯು ಬೇರೆ ಬೇರೆ ವರ್ಗದ ಉದ್ಯಮಗಳು ನಾನಾ ಗುಂಪಿನ ಕಾರ್ಮಿಕರ ನಡುವೆ ಎಷ್ಟು ಆದಾಯ ವ್ಯತ್ಯಾಸವಿರಬೇಕೆಂಬುದನ್ನು ಕಂಡುಹಿಡಿಯ ಬೇಕು.

(xvi) ಹಣದುಬ್ಬರದ ವಿರುದ್ಧ ನಡೆಸುವ ಹೋರಾಟದಲ್ಲಿ ಕೃಷಿ ವಸ್ತುಗಳು ಮತ್ತು ಅದಕ್ಕೆ ಸಂಬಂಧಿಸಿದ ಅಗತ್ಯ ಆದಾನಗಳ ಅಲ್ಪಾವಧಿ ಬೆಳವಣಿಗೆ ದರವನ್ನು ಹೆಚ್ಚು ಮಾಡಿಸು ವುದಕ್ಕೋಸ್ಕರ ಆ ಕ್ಷೇತ್ರಗಳಿಗೆ ಹೂಡಿಕೆಯನ್ನು ಮಾಡಲು ಅತ್ಯಂತ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡುವುದು ಅಗತ್ಯ. ನಮ್ಮ ಯೋಜನೆಯ ವಾರ್ಷಿಕ ಕಾರ್ಯಕ್ರಮಗಳಲ್ಲಿ ಇಂತಹ ಪ್ರಾಧಾನ್ಯತೆಗೆ ಗಮನ ನೀಡಬೇಕು.

(xvii) ಕೈಗಾರಿಕಾ ದಕ್ಷತೆಯನ್ನು ಏಕೆ ಸಂಪೂರ್ಣವಾಗಿ ಉಪಯೋಗಿಸಿಕೊಂಡಿಲ್ಲ ಮತ್ತು ಏಕೆ ಕೈಗಾರಿಕಾ ಉತ್ಪನ್ನ ಕುಗ್ಗಿದೆ ಎನ್ನುವುದರ ಕಾರಣಗಳನ್ನು ಕಂಡುಹಿಡಿಯಲು ಒಂದು ಸಮೀಕ್ಷಾ ಸಮಿತಿಯನ್ನು ರಚಿಸಬೇಕು. ದಕ್ಷತೆಯನ್ನು ಪೂರ್ಣ ವಾಗಿ ಬಳಸಿಕೊಳ್ಳುವುದು, ಅನೇಕ ಸರದಿಗಳಲ್ಲಿಗಳಲ್ಲಿ ಕೆಲಸ ಮಾಡುವುದು, ಪುನರೀಕರಣ ಮುಂತಾದ, ದಕ್ಷತೆಯನ್ನು

ಹೆಚ್ಚಿಸುವ ಕ್ರಮಗಳ ಮೂಲಕ ಸ್ಥಿರ ಬಂಡವಾಳದ ಮೇಲೆ ಹೆಚ್ಚಿನ ಹಣವನ್ನು ಹೂಡದೆ ಕೈಗಾರಿಕಾ ಉತ್ಪಾದನೆಯನ್ನು ಹೆಚ್ಚಿಸಬಹುದಾಗಿದೆ.

ಈ ಸಂದರ್ಭದಲ್ಲಿ ನಾವು ಒಂದು ವಿಷಯವನ್ನು ಸೂಚಿಸಬೇಕು. ಡಾ|| ಮದನ್ ಮತ್ತು ಇತರ ಕೆಲವು ಅರ್ಥವಿಜ್ಞಾನಿಗಳು ಈ ಕೆಳಗಿನ ಅಭಿಪ್ರಾಯವನ್ನು ಹೊಂದಿದ್ದಾರೆ: ನಾವು ಸೂಚಿಸಿರುವ ಇತರ ಕ್ರಮಗಳು ಹಣದುಬ್ಬರವನ್ನು ಹತ್ತಿಕ್ಕಲು ಅತ್ಯಂತ ಹೆಚ್ಚು ಶಕ್ತವಾಗಿರುವುದರಿಂದ ಮತ್ತು ನಾವು ಸೂಚಿಸಿರುವ ಹಣನೀಡಿಕೆಯ ಕಡಿತ, ಕೂಲಿ, ಲಾಭ ಮತ್ತು ಡಿವಿಡೆಂಡ್‌ಗಳನ್ನು ಹೆಪ್ಪುಗಟ್ಟಿಸುವಿಕೆಯು ಅನೇಕ ವಾಸ್ತವಿಕ ತೊಂದರೆಗಳನ್ನುಂಟುಮಾಡುವ ದೃಷ್ಟಿಯಿಂದ ಅವುಗಳನ್ನು ಜಾರಿಗೆ ತರಬಾರದು. ಆದರೆ ಇದಕ್ಕೆ ವಿರುದ್ಧವಾಗಿ ಮತ್ತೆ ಕೆಲವು ಅರ್ಥವಿಜ್ಞಾನಿಗಳು ನಾವು ಈಗಾಗಲೆ ಸೂಚಿಸಿರುವ ಕ್ರಮಗಳ ಜೊತೆಗೆ ಬಂಡವಾಳ ಲೆವಿಯಂತಹ ಬಲವಾದ ಕ್ರಮವು ಸಹ ಅಗತ್ಯವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

## ಆರ್ಥಿಕ ಕೌನ್ಸಿಲ್

ಯಾವುದೇ ಅರ್ಥವ್ಯವಸ್ಥೆಯಲ್ಲಾಗಲೀ ಪ್ರತಿಯೊಂದು ಅಲ್ಪಾವಧಿಯಲ್ಲಿ ಆದರ್ಶಮಟ್ಟದ ಆರ್ಥಿಕ ನಿರ್ವಹಣೆಯನ್ನು ಮಾಡುವುದು ಕಷ್ಟವೇ ಸರಿ. ನಮ್ಮಂತಹ ಬಡರಾಷ್ಟ್ರದಲ್ಲಿ ಅದು ಇನ್ನೂ ಕಷ್ಟ. ಬಹಳ ಅನಿರೀಕ್ಷಿತವಾದ ರೀತಿಯಲ್ಲಿ ಆರ್ಥಿಕ ಸಮಸ್ಯೆಗಳು ಪ್ರತ್ಯಕ್ಷವಾಗುತ್ತಿರುತ್ತವೆ. ಒತ್ತಡದ ಮೇಲೆ ಒತ್ತಡಗಳು ಬರುವುದಕ್ಕೆ ಪ್ರಾರಂಭವಾಗುತ್ತವೆ. ಪ್ರತಿಯೊಂದು ಕೊರತೆಯಿಂದಲೂ ಇಡೀ ಉತ್ಪಾದನ ಕ್ರಮವನ್ನೇ

ನಿಲ್ಲಿಸುವಂತಾಗುತ್ತದೆ. ಬಿಕ್ಕಟ್ಟು ವೃದ್ಧಿಯಾಗುತ್ತದೆ. ಈ ಕಾರಣಗಳಿಂದ ಯಾವ ತತ್ವವೂ ಇಲ್ಲದ ನೀತಿಯನ್ನು ಅನುಸರಿಸಲು ಬಹಳ ಆಕರ್ಷಣೆ ಉಂಟಾಗುತ್ತದೆ. ದಿಢೀರನೆ ಉದ್ಭವಿಸುವ ಪ್ರಶ್ನೆಯನ್ನು ಇಂತಹ ನೀತಿಗಳಿಂದ ಪರಿಹರಿಸಿ ಕೊಂಡರೆ ಸಾಕೆನಿಸುತ್ತದೆ. ಈ ರೀತಿಯ ಪರಿಹಾರಗಳು ಸಮಸ್ಯೆಗೆ ಉತ್ತರವನ್ನು ಮುಂದಕ್ಕೆ ಹಾಕುತ್ತವೆ. ಭವಿಷ್ಯದಲ್ಲಿ ಇದು ಹೆಚ್ಚಿನ ಸಮಸ್ಯೆಗಳನ್ನು ಸೃಷ್ಟಿಸಿ ಅರ್ಥವ್ಯವಸ್ಥೆ ಅಲ್ಪಾವಧಿಯಲ್ಲಲ್ಲದೆ ದೀರ್ಘಾವಧಿಯಲ್ಲೂ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕುತ್ತಲೇ ಹೋಗುವಂತೆ ಮಾಡುತ್ತದೆ.

ನಾವು ನೀಡಿರುವ ಶಿಫಾರಸ್ಸುಗಳು ಅರ್ಥವ್ಯವಸ್ಥೆಯನ್ನು ಸಮನಾದ ಗಾಲಿಗಳ ಮೇಲೆ ಮುನ್ನಡೆಯುವಂತೆ ಮಾಡುತ್ತವೆ. ಆದರೆ ಇವುಗಳನ್ನು ಜಾರಿಗೆ ತರುವುದಕ್ಕೆ ಒಂದು ಆರ್ಥಿಕ ಸಮಿತಿಯನ್ನು ರಚಿಸುವುದು ಬಹುಮಟ್ಟಿಗೆ ಸಹಾಯಕವಾಗ ಬಲ್ಲದು. ಈ ಸಮಿತಿಯು 3ರಿಂದ 5 ಜನ ವಿದ್ಯಾಪೀಠಗಳ ಅರ್ಥ ವಿಜ್ಞಾನಿಗಳನ್ನು ಒಳಗೊಂಡಿರಬೇಕು. ಪ್ರಧಾನಮಂತ್ರಿ ಯವರ ಮಂತ್ರಾಲಯಕ್ಕೆ ಈ ಸಮಿತಿಯನ್ನು ಸಂಪರ್ಕಿಸಬೇಕು. ಈ ಸಮಿತಿಯು ರಾಷ್ಟ್ರೀಯ ಮಟ್ಟದ ಆರ್ಥಿಕವಿಧಾನಗಳನ್ನು ಕಾಯುವ ಉಸ್ತುವಾರೀ ಪಡೆಯಾಗಬಲ್ಲದು. ಅದು ಅಲ್ಪಾವಧಿ ಆರ್ಥಿಕ ಕ್ರಮಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿ ಅನೇಕ ನೀತಿಗಳ ಯುಕ್ತ ಸಂಯೋಜನೆಯನ್ನು ಮಾಡಬಲ್ಲದು. ಸಮಿತಿಯು ಪಾರ್ಲಿಮೆಂಟಿಗೆ ಕಾಲದಿಂದ ಕಾಲಕ್ಕೆ ಅರ್ಥ ವ್ಯವಸ್ಥೆಯ ಸಮಗ್ರಕ್ರಿಯೆ ಹೇಗೆ ಮುಂದುವರೆಯುತ್ತಿದೆ ಎಂಬುದರ ಬಗ್ಗೆ ತಿಳಿಸಬಲ್ಲದು ಸಹ. ಈ ಅರ್ಥವಿಜ್ಞಾನಿಗಳನ್ನು ವಿಶ್ವವಿದ್ಯಾನಿಲಯಗಳಿಂದ ಆಯ್ದುಕೊಳ್ಳುವುದು ಒಳಿತು.

ಯಾವ ಸದಸ್ಯನೇ ಆಗಲಿ ಸಮಿತಿಯಲ್ಲಿ ಮೂರುವರ್ಷಕ್ಕಿಂತ ಹೆಚ್ಚು ಇರಬಾರದು. ಏಕೆಂದರೆ ದೀರ್ಘಾವಧಿಯವರೆಗೆ ಅಧಿಕಾರ ದಲ್ಲಿದ್ದರೆ ಅರ್ಥಶಾಸ್ತ್ರಜ್ಞರು ಸಹ ಜಡತೆ, ಅಧಿಕಾರಶಾಹಿ ಮುಂತಾದ ದೌರ್ಬಲ್ಯಗಳನ್ನು ಗಳಿಸಿಕೊಂಡು ಸಮಿತಿಯ ಕಾರ್ಯವನ್ನು ಜಡವಾಗಿಸಬಹುದು.

## ಯೋಜನೆ

ನಮ್ಮ ಮಾತನ್ನು ಮುಗಿಸುವುದಕ್ಕಿಂತ ಮುಂಚೆ ಯೋಜನೆಯ ಬಗ್ಗೆ ಮನನ ಮಾಡಬೇಕಾದ ವಿಷಯದ ಬಗ್ಗೆ ಆಲೋಚನೆ ಯೊಂದನ್ನು ಮಂಡಿಸುತ್ತೇವೆ. ಮೇಲಿನ ಶಿಫಾರಸುಗಳನ್ನು ತಕ್ಷಣವೆ ಒಪ್ಪಿಕೊಂಡು ಪ್ರಾಮಾಣಿಕತೆಯಿಂದ ಕಾರ್ಯಗತ ಮಾಡಿದಲ್ಲಿ ಹಣದುಬ್ಬರದ ಬೆನ್ನುಮೂಳೆ ಮುರಿಯುವುದರಲ್ಲಿ ಸಂಶಯವಿಲ್ಲ. ಇದರಿಂದ ಉಳಿತಾಯ ವಿಧಾನಕ್ಕೆ ಅತ್ಯಂತ ಹೆಚ್ಚಿನ ಪ್ರೋತ್ಸಾಹ ಸಹ ದೊರೆಯುತ್ತದೆ. ಇದು ಅರ್ಥವ್ಯವಸ್ಥೆಯನ್ನು ಒಂದೆರಡು ವರ್ಷಗಳಲ್ಲಿ ಆಶಿಸಲಾಗಿರುವ ಬೆಳವಣಿಗೆಯನ್ನು ಗಮನಿಸುವ ಕಡೆಗೆ ಕೊಂಡೊಯ್ಯುತ್ತದೆ. ಇದೇ ಸಮಯದಲ್ಲಿ ಇಡೀ ಯೋಜನೆಯ ಅಭ್ಯಾಸಗಳನ್ನು ಮೂರು ಘಟ್ಟಗಳ ಸಮಗ್ರ ಹೂಡಿಕೆಗಳಾಗಿ ಗ್ರಹಿಸ ಬೇಕಾಗುತ್ತದೆ. ಮೊದಲನೆಯ ಘಟ್ಟದ ಹೂಡಿಕೆ ಖಾಸಗಿ ಮತ್ತು ಸಾರ್ವಜನಿಕ ರಂಗಗಳಲ್ಲಿ ಕೂಲಿ ಸರಕುಗಳ ಉತ್ಪನ್ನ ವಿಸ್ತಾರಕ್ಕೆ ಮತ್ತು ರಫ್ತು ಸರಕುಗಳ ಉತ್ಪನ್ನಸಾಮರ್ಥ್ಯ ವಿಸ್ತಾರಕ್ಕಾಗಿ ನಡೆಯಬೇಕು. ಎರಡನೆಯ ಘಟ್ಟವು, ಕೂಲಿಸರಕು ಮತ್ತು ರಫ್ತುಸರಕುಗಳ ಉತ್ಪನ್ನದ ದೀರ್ಘಾವಧಿ ಹೆಚ್ಚಳಕ್ಕೆ ಪೂರಕ ವಾಗುವಂತೆ ಬೇಕಾಗುವ ಸ್ವರೂಪಿಕ ವಿಷಯಗಳ ವಿಸ್ತರಣೆಗಾಗಿ

ನಡೆಯಬೇಕು. ಮೂರನೆಯ ಘಟ್ಟದ ವೆಚ್ಚವು ರಾಷ್ಟ್ರಕ್ಕೆ ಆಧುನಿಕ ತಂತ್ರವಿಜ್ಞಾನದ ಪ್ರಗತಿಗೆ ಬೇಕಾಗುವ ಆಸ್ತಿಭಾರವನ್ನು ಹಾಕುವುದಕ್ಕಾಗಿ ನಡೆಯಬೇಕು. ಮೊದಲನೆಯ ಘಟ್ಟವು ಹಣದುಬ್ಬರವನ್ನು ಹತ್ತಿಕ್ಕುವುದಕ್ಕೆ ನೇರಪರಿಣಾಮವನ್ನುಂಟು ಮಾಡುತ್ತಿದೆ. ಮೊದಲನೆಯ ಹಾಗೂ ಎರಡನೆಯ ಘಟ್ಟಗಳು ಒಟ್ಟಾಗಿ ಜಡತನವನ್ನು ಬಹಳ ತ್ವರಿತವಾಗಿ ನಾಶಮಾಡುವುದಕ್ಕೆ ಸಹಾಯಕವಾಗುತ್ತವೆ. ಪ್ರಸ್ತುತದಲ್ಲಿ ಲಭ್ಯವಿರುವ ಉಳಿತಾಯ ಗಳನ್ನು ಈ ಎರಡೂ ಘಟ್ಟಗಳಿಗೆ ವೆಚ್ಚಮಾಡಲು ಆದ್ಯತೆ ನೀಡಬೇಕು. ಈ ಕ್ಷೇತ್ರಗಳಲ್ಲಿ ಸಿದ್ಧಿ ಪಡೆದನಂತರ ಉಳಿತಾಯವು ಹೆಚ್ಚು ವಿಸ್ತಾರವಾಗುತ್ತದೆ. ನಂತರ ಇದನ್ನು ಬಳಸಿಕೊಂಡು ಮೂರನೆಯ ಘಟ್ಟದ ಹೂಡಿಕೆಯನ್ನು ನಡೆಸಲು ಸಹಜವಾಗಿಯೇ ಸಾಧ್ಯವಾಗುತ್ತದೆ. ಯೋಜನೆಯನ್ನು ರೂಪಿಸುವವರು ಮೊದಲನೆಯ ಎರಡು ಘಟ್ಟಗಳನ್ನು 'ಅತ್ಯಂತಮುಖ್ಯ' ವಾದುವೆಂದು ಪರಿಗಣಿಸಬೇಕು. ತಮ್ಮ ಯೋಜನೆಯ ಅವಧಿಯ ಹೂಡಿಕೆಯಲ್ಲಿ ಈ ಹೂಡಿಕೆಗಳನ್ನು ಪ್ರಧಾನವೆಂದು ಪರಿಗಣಿಸು ವುದರ ಮೂಲಕ ಅವರು ಖಾಯಂ ಆದ ಮೂರು ಘಟ್ಟದ ಶೀಘ್ರ ಪರಿವರ್ತನೆ ಸತ್ಯವಾಗುವಂತೆ ಮಾಡಬಹುದು.

ಹಣದುಬ್ಬರದ ವಿರುದ್ಧದ ಹೋರಾಟವನ್ನು ಎರಡು ದಿಕ್ಕು ಗಳಿಂದ ನಡೆಸಬೇಕು. ಹಣದ ನೀಡಿಕೆಯ ಬೆಳವಣಿಗೆಯನ್ನು ತೀವ್ರವಾಗಿ ಕಡಮೆಮಾಡುವುದು ಮತ್ತು ಕೃಷಿ ಮೂಲಕ ಮೂಲಾವಶ್ಯಕ ಅನುಭೋಗಿ ಸರಕುಗಳ ನೀಡಿಕೆಯ ದರವನ್ನು ತೀವ್ರವಾಗಿ ಹೆಚ್ಚು ಮಾಡುವುದು. ಪ್ರಸ್ತುತದಲ್ಲಿ ಭಾರತದ ಪರಿಸ್ಥಿತಿಗೆ ಈ ಎರಡು ದಿಕ್ಕಿನ ಹೋರಾಟವೆ ಹಣದುಬ್ಬರಕ್ಕೆ

ಪರಿಹಾರವನ್ನೊದಗಿಸಬಲ್ಲ ಏಕೈಕ ಮಾರ್ಗ. ಈ ಯುದ್ಧವನ್ನು ನಾವು, ಸರಿಯಾದ ಸಾಮಾಜಿಕ ಸ್ವರೂಪದ ಚೌಕಟ್ಟಿನೊಳಗೆ ನಡೆಸಬೇಕು. ಈ ಉಳಿತಾಯ, ಸರಳತೆ, ಉದ್ಯಮಶೀಲತೆ, ತಾಂತ್ರಿಕಪ್ರಗತಿ, ಕೆಲಸದಲ್ಲಿ ಶ್ರದ್ಧೆ, ಸಾಮಾಜಿಕ ಹೊಣೆಗಾರಿಕೆ ಮತ್ತು ಸಮಾಜಕ್ಕೆ ನಾವು ಜವಾಬನ್ನು ಕೊಡಬೇಕೆಂಬ ಮನೋಭಾವದ ಅಂಶಗಳಿಂದ ಸಾಧಿಸುವ ಅಭಿವೃದ್ಧಿ ಈ ಸಾಮಾಜಿಕ ಚೌಕಟ್ಟಿನೊಳಗಿನ ಮುಖ್ಯಲಕ್ಷಣಗಳಾಗಿರಬೇಕು.